


# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*





Vol-14 March - 2017 Issue No. 03 ₹ 10/-


ಹೇವಿಳಂಬಿ ಸಂವತ್ಸರವು ಎಲ್ಲರಿಗೂ ಆನಂದವನ್ನು ಮತ್ತು ಸೌಖ್ಯವನ್ನು ನೀಡಲೆಂದು ಹಾರೈಸುತ್ತೇವೆ.




## World Water Day

**March 22**



ri Siddaramaiah, Hon'ble Chief Minister of Karnataka and President B.S&G., Karnataka, Sri K.J. George, Hon'ble Minister for Bengaluru Development and Town Planning, Sri P.G.R. Sindhia, State Chief Commissioner, BS&G, Karnataka, Sri K. Lakshman, Chairman, Karnataka State Pollution Control Board nd Sri Mahendra Jain, I.A.S., Additional Chief Secretary to Govt., Dept. of Urban Development are seen t the Launching of **"Save Water - Save Bengaluru"** campaign on the occasion of **"World Water Day"** Organised by **Bengaluru Water Supply and Sewerage Board** in association with the **Bharat Scouts & Guides, Karnataka** and Other **N.G.O's** on 22nd March 2017 at Vidhana Soudha.



Sri Siddaramaiah, Hon'ble Chief Minister Launching the Programme



Scouts & Guides Participated in the Awareness Route March

# ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಆಚರಿಸಿದ "ವಿಶ್ವ ಚಿಂತನಾ" ದಿನಾಚರಣೆ ಕಾರ್ಯಕ್ರಮಗಳ ವಿಹಂಗಮ ನೋಟ


ರಾಯಚೂರು


ಧಾರವಾಡ


ಶಿವಮೊಗ್ಗ


ಚಾಮರಾಜನಗರ


ಚಿತ್ರದುರ್ಗ



ಯಾದಗಿರಿ


ಕೋಲಾರ


ದಾವಣಗೆರೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*




## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.



ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scouts-Guides Karnataka




# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ವಿದ್ಯಾರ್ಥಿಗಳಿಗೀಗಾ ಪರೀಕ್ಷಾ ಸಮಯ. ಉತ್ತಮ ಅಂಕಗಳನ್ನು ಗಳಿಸಿ ತೇರ್ಗಡೆಯಾಗಬೇಕು. ಪರೀಕ್ಷೆಗೆ ಹೆದರುವ ಅವಶ್ಯಕತೆಯಿಲ್ಲ. ಆದರೆ, ಪೂರ್ವಸಿದ್ದತೆ ಇರಬೇಕು. ಸ್ಕೌಟ್‌ನ ಧ್ಯೇಯ ವಾಕ್ಯದಂತೆ ನಾವು "ಸದಾ ಸಿದ್ದವಾಗಿರಬೇಕು" (**"Be Prepared"**).

ಈ ತಿಂಗಳ 8 ರಂದು ವಿಶ್ವದಾದ್ಯಂತ "ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆ"ಯನ್ನು ಆಚರಿಸಲಾಗಿದೆ. ಭಾರತವೂ ಸೇರಿದಂತೆ, ಪ್ರಪಂಚದ ಎಲ್ಲ ಸಮಾಜ / ಸಮೂಹಗಳು ಈಗಲೂ ಪುರುಷ ಪ್ರಧಾನವಾಗಿದೆ. ಲಿಂಗ ಸಮಾನತೆಗಾಗಿ ಮಹಿಳೆಯರು ಹಿಂದಿನಕಾಲದಿಂದಲೂ ಹೋರಾಡುತ್ತಲೇ ಇದ್ದಾರೆ. ಆದರೆ, ಈ ಹೋರಾಟವು ಒಂದು ಅರ್ಥಪೂರ್ಣ ರೂಪವನ್ನು ಪಡೆದಿದ್ದು, 20ನೇ ಶತಮಾನದ ಮೊದಲ ಭಾಗದಲ್ಲಿ. ವಿಶೇಷವಾಗಿ ಅಮೇರಿಕಾದಲ್ಲಿ. ವೇತನ ಅಸಮಾನತೆ, ಮತದಾನದ ಹಕ್ಕು ಮತ್ತು ದುಡಿಯಲು ಅನುಕೂಲಕರವಾದ ವಾತಾವರಣ ಹೋರಾಟದ ಮುಖ್ಯ ಅಂಶಗಳಾಗಿದ್ದವು. 1910ರಲ್ಲಿ ಕೋಪನ್ ಹೇಗನ್‌ನಲ್ಲಿ ನಡೆದ 2ನೇ ಅಂತರ ರಾಷ್ಟ್ರೀಯ "ದುಡಿಯುವ ಮಹಿಳೆಯರ ಸಮಾವೇಶ"ದಲ್ಲಿ ಜರ್ಮನಿಯ ಸೋಷಿಯಲ್ ಡೆಮಾಕ್ರೆಟಿಕ್ ಪಕ್ಷದ ನಾಯಕಿಯಾಗಿದ್ದ **ಶ್ರೀಮತಿ ಕ್ಲಾರಾ ಜೆಟ್ ಕಿನ್** ಅವರು ಮಂಡಿಸಿದ ನಿರ್ಣಯದಂತೆ, "ಪ್ರತಿ ವರ್ಷವೂ ವಿಶ್ವದಾದ್ಯಂತ ಮಹಿಳೆಯರ ಹಕ್ಕುಗಳಿಗಾಗಿ ಒತ್ತಾಯಿಸಲು ಅಂತರ ರಾಷ್ಟ್ರೀಯ ಮಹಿಳಾ ದಿನವನ್ನು ಆಚರಿಸಬೇಕು" ಎಂದು ತೀರ್ಮಾನಿಸಲಾಯಿತು. 1975ರಲ್ಲಿ ವಿಶ್ವ ಸಂಸ್ಥೆಯ ಮಹಾ ಅಧಿವೇಶನವು ಮಹಿಳೆಯರ ಹಕ್ಕುಗಳು ಮತ್ತು ಅಂತರರಾಷ್ಟ್ರೀಯ ಶಾಂತಿಗಾಗಿ ಪ್ರತಿ ವರ್ಷ ಮಾರ್ಚ್ 8 ರಂದು "ಅಂತರ ರಾಷ್ಟ್ರೀಯ ಮಹಿಳಾ ದಿನ"ವನ್ನು ಆಚರಿಸಲು ನಿರ್ಣಯಿಸಿತು.



ಭಾರತವೂ ಸೇರಿದಂತೆ, ವಿಶ್ವದ ಹಲವು ರಾಷ್ಟ್ರಗಳಲ್ಲಿ ಮಹಿಳೆಯ ಸ್ಥಿತಿ-ಗತಿ ಸಾಕಷ್ಟು ಸುಧಾರಣೆಯಾಗಿದ್ದರೂ, ಸಮಾನ ಶಿಕ್ಷಣ, ಸಮಾನ ಉದ್ಯೋಗಾವಕಾಶ ಮತ್ತು ಸಾಮಾಜಿಕ-ಸಾಂಸ್ಕೃತಿಕ ಬೆಳವಣಿಗೆಯು ನಿರೀಕ್ಷಿತ ಮಟ್ಟದಲ್ಲಿ ಆಗಿಲ್ಲ. ವ್ಯಾಪಾರ, ವ್ಯವಹಾರ ಮತ್ತು ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರಿಗೆ ಅವಕಾಶಗಳು ಸಮ ಪ್ರಮಾಣದಲ್ಲಿ ದೊರೆಯುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಘಟಿಸಿದಂತಹ "ನಿರ್ಭಯ" ಪ್ರಕರಣಗಳು ನಾವು ತಲುಪಬೇಕಾದ ಗುರಿ ಇನ್ನೂ ದೂರವಿದೆ, ದಾರಿ ಕಠಿಣವಿದೆ ಎಂಬುದನ್ನು ತೋರಿಸುತ್ತದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಯಾವಾಗಲೂ ಮಹಿಳೆಯರಿಗೆ ಸಮಾನ ಅವಕಾಶಗಳನ್ನು ಒದಗಿಸಿಕೊಡಲು ಪ್ರಯತ್ನಿಸುತ್ತಿದೆ. ಸ್ಕೌಟ್ಸ್ ಮತ್ತು ರೋವರ್ಸ್ ನಂತೆಯೇ ಗೈಡ್ಸ್ ಮತ್ತು ರೇಂಜರ್ಸ್‌ಗಳ ಚಟುವಟಿಕೆಗಳು ಚೆನ್ನಾಗಿ ನಡೆಯುತ್ತಿದೆ. ನಮ್ಮ ಜಿಲ್ಲಾ / ತಾಲ್ಲೂಕು / ಸ್ಥಳೀಯ ಘಟಕಗಳು ಮಹಿಳಾ ದಿನಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಿ ಅವುಗಳ ವರದಿಯನ್ನು ಸಲ್ಲಿಸಲಿ ಎಂದು ನಾನು ಬಯಸುತ್ತೇನೆ.

ಕಳೆದ ಸಂಚಿಕೆಯಲ್ಲಿ ನಾನು ನೀರಿನ ತೀವ್ರ ಕೊರತೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಜನಜಾಗೃತಿಯನ್ನು ಉಂಟು ಮಾಡುವ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳುವುದರ ಬಗ್ಗೆ ಕೆಲವು ಮಾತುಗಳನ್ನು ಹಂಚಿಕೊಂಡಿದ್ದೆ. ವಿಶ್ವಸಂಸ್ಥೆಯ ಮಹಾಧಿವೇಶನದ ನಿರ್ಣಯದಂತೆ, ಪ್ರತಿವರ್ಷ ಮಾರ್ಚ್ 22ನೇ ತಾರೀಖನ್ನು **"ವಿಶ್ವ ಜಲ ದಿನ"**ವನ್ನಾಗಿ ಆಚರಿಸಬೇಕು. ಎಲ್ಲಾ ಚರಾಚರ ಜೀವಿಗಳಿಗೂ ನೀರು ಅತ್ಯಮೂಲ್ಯವಾದ ಸಂಪತ್ತು. ಬದುಕು ನೀರಿನ ಮೂಲಕವೇ. ಅದರಲ್ಲೂ ಸ್ವಚ್ಛ ನೀರು ಮಾನವ ಜೀವನಕ್ಕೆ ಅತ್ಯಂತ ಅವಶ್ಯಕವಾದುದು. ಪ್ರಪಂಚದಲ್ಲಿ ಶೇಕಡ 85 ರಷ್ಟು ಜನರು ಭೂಮಿಯ ಒಣ ಪ್ರದೇಶದಲ್ಲಿ ವಾಸ ಮಾಡುತ್ತಾರೆ. 800 ದಶ ಲಕ್ಷ ಜನರಿಗೆ ಕುಡಿಯುವ ನೀರು ಸಿಕ್ಕುವುದಿಲ್ಲ. ಸುಮಾರು 2.5 ಶತಕೋಟಿ ಜನರಿಗೆ ಒಳಚರಂಡಿಯ ಸೌಲಭ್ಯವಿಲ್ಲ. ಪ್ರತಿ ವರ್ಷ 8 ಲಕ್ಷ ಜನರು ನೀರಿಗೆ ಸಂಬಂಧಿಸಿದಂತಹ ಖಾಯಿಲೆಗಳಿಂದ ಅಸುನೀಗುತ್ತಿದ್ದಾರೆ ಎಂಬುದು ಗಾಬರಿ ಹುಟ್ಟಿಸುವ ಅಂಕಿ-ಅಂಶಗಳು. ಸ್ವಚ್ಛ ನೀರನ್ನು ಜನರಿಗೆ, ಜಾನುವಾರುಗಳಿಗೆ ದೊರಕಿಸುವುದು ಎಲ್ಲ ನಾಗರೀಕರ ಮತ್ತು ಸರ್ಕಾರಗಳ ಪ್ರಮುಖ ಕೆಲಸವಾಗಿರಬೇಕು. ನೀರನ್ನು ಸದುಪಯೋಗವಾಗುವಂತೆ ಬಳಸುವುದು, ಪುನರ್ ಬಳಕೆಯನ್ನು ಮಾಡುವುದು, ಇಂದಿನ ತೀವ್ರ ಅವಶ್ಯಕತೆ ಆಗಿದೆ. 2017ರ ನೀರಿನ ದಿನದ ಘೋಷವಾಕ್ಯವು "ನೀರನ್ನು ಏಕೆ ದಂಡಮಾಡುತ್ತೀರಿ ?" ಎಂಬುದಾಗಿದೆ.



ನೀರಿನ ಬಗ್ಗೆ ಜನಜಾಗೃತಿಯನ್ನು ಉಂಟುಮಾಡಲು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದೆ. ಮಾರ್ಚ್ 20, 2017ರಂದು "ನೀರು ಉಳಿಸಿ-ಬೆಂಗಳೂರು ಉಳಿಸಿ" ಅಭಿಯಾನವನ್ನು ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲಾ ಸಂಸ್ಥೆಗಳು ಏರ್ಪಡಿಸಿದ್ದವು. ಕಾರ್ಯಕ್ರಮವನ್ನು ಶ್ರೀ ಬಿ.ಕೆ.ಬಸವರಾಜು, ಜಂಟಿ ನಿರ್ದೇಶಕರು (ಶಾಲಾ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಉದ್ಘಾಟಿಸಿದರು. ಶ್ರೀ ಕೆ.ಎಸ್.ಮೇಲುಕೋಟೆ, ಅಧ್ಯಕ್ಷರು, ಬರ್ಡ್ ಟ್ರೀ ಇಂಟರ್ ನ್ಯಾಷನಲ್, ಶ್ರೀಮತಿ ಶಮಂತ, ಡಿ.ಎಸ್., ನಿರ್ದೇಶಕರು, ಸಾರಥಿ ರಿಸೋರ್ಸ್ ಸೆಂಟರ್ ಫಾರ್ ಕಮ್ಯುನಿಕೇಷನ್, ಶ್ರೀ ಉಲ್ಲಾಸ್ ಕುಮಾರ್.ಆರ್.ಕೆ., ಪರಿಸರ ಪತ್ರಕರ್ತರು, ಇಕೊವಾರ್ಚ್, ಶ್ರೀಮತಿ ಸುಮಂಗಲ ಮಂಮಿಗಟ್ಟಿ, ಕಾರ್ಯಕ್ರಮಗಳ ಕಾರ್ಯನಿರ್ವಾಹಕರು (ವಿಜ್ಞಾನ), ಆಕಾಶವಾಣಿ, ಬೆಂಗಳೂರು, ಶ್ರೀ ಎ.ಆರ್. ಶಿವಕುಮಾರ್, ಪ್ರಧಾನ ವೈಜ್ಞಾನಿಕ ಅಧಿಕಾರಿ, ಕರ್ನಾಟಕ ರಾಜ್ಯ ವಿಜ್ಞಾನ ಹಾಗೂ ತಾಂತ್ರಿಕ ಪರಿಷತ್ತು ಇವರುಗಳು ಸಮಸ್ಯೆಯ ವಿವಿಧ ಮುಖಗಳ ಬಗ್ಗೆ ಚರ್ಚಿಸಿದರು. ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ವಿಧಾನ ಸೌಧದ ಮುಂಭಾಗದಲ್ಲಿ "ನೀರು ಉಳಿಸಿ - ಬೆಂಗಳೂರು ಉಳಿಸಿ" ಜಾಗೃತಿ ಜಾಥಾ ಕಾರ್ಯಕ್ರಮವನ್ನು ಮಾರ್ಚ್ 22, 2017ರಂದು ಆಯೋಜಿಸಿತ್ತು. ಈ ಕಾರ್ಯಕ್ರಮಕ್ಕೆ ಸಹಯೋಗವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ನೀಡಿದೆ.

ಇದೆಲ್ಲದರ ಜೊತೆಗೆ ನೀರನ್ನು ಉಪಯೋಗಿಸುವುದರ ಬಗ್ಗೆ ವೈಯಕ್ತಿಕ ಮಟ್ಟದಲ್ಲಿ ನಾವೆಲ್ಲರೂ ಜಾಗೃತಿಯನ್ನು ಉಂಟುಮಾಡುತ್ತಿರಬೇಕು ಮತ್ತು ನೀರನ್ನು ಜಾಗರೂಕವಾಗಿ ಬಳಸಿಕೊಳ್ಳಬೇಕು. ನಮ್ಮ ಮನೆಗಳಲ್ಲಿ "ಮಳೆ ಕೃಷಿ"ಯನ್ನು ಅಳವಡಿಸಿಕೊಳ್ಳಬೇಕು. ಹಣಕ್ಕಿಂತಲೂ ನೀರು ಮುಖ್ಯವೆಂಬುದನ್ನು ಎಲ್ಲರೂ ಮನಗಾಣಬೇಕಾದ ತುರ್ತು ಸಮಯವೀಗ ಬಂದಿದೆ.

ಏಪ್ರಿಲ್ 14, 2017ರಂದು ಭಾರತ ರತ್ನ ಬಾಬಾ ಸಾಹೇಬ್ ಅಂಬೇಡ್ಕರ್ ರವರ (ಜನನ 14 ಏಪ್ರಿಲ್ 1891) 126ನೇ ಹುಟ್ಟಿದ ಹಬ್ಬ. ದಲಿತರ, ಹಿಂದುಳಿದವರ, ನೋವುಗಳನ್ನು ಸ್ವತ: ಅನುಭವಿಸಿ, ಅವುಗಳ ಪರಿಹಾರಕ್ಕಾಗಿ ಸಾಮಾಜಿಕ ಪರಿವರ್ತನೆಗಾಗಿ ಹೋರಾಡಿದ ಮಹಾನ್ ಹರಿಕಾರರು ಅವರು. ಸ್ವಾತಂತ್ರ್ಯ ಭಾರತಕ್ಕೆ ತನ್ನದೇ ಆದ ಸಂವಿಧಾನವನ್ನು ರಚಿಸಿದ ಸಂವಿಧಾನ ಸಮಿತಿಯ ಅಧ್ಯಕ್ಷರಾಗಿ ಅವರು ನೀಡಿದ ಕೊಡುಗೆ ಅಪಾರ. ಭಾರತದ ಸಂವಿಧಾನದ ಶಕ್ತಿಯಿಂದಲೇ ನಾವಿಂದು ಸಮಾಜವಾದಿ ಸಾರ್ವಭೌಮ ಪ್ರಜಾಪ್ರಭುತ್ವವಾದಿ ಗಣರಾಜ್ಯವನ್ನು ನಿರ್ಮಿಸಲು ಸಾಧ್ಯವಾಗಿದೆ.



ಕಳೆದ ಸಂಚಿಕೆಯಲ್ಲಿ ನಿಮ್ಮೊಂದಿಗೆ ಸ್ಕೌಟಿಂಗ್ ಕುರಿತ ಕೆಲವು ಆಲೋಚನೆಗಳನ್ನು ಹಂಚಿಕೊಂಡಿದ್ದೆ. ಸ್ಕೌಟ್ಸ್ / ಗೈಡ್ಸ್ ಪ್ರತಿಜ್ಞಾವಿಧಿ ಮತ್ತು ನಿಯಮಗಳ ಪಾಲನೆ ನಮ್ಮ ಬದುಕಿನ ಅಂಗವಾಗಬೇಕು. ತನ್ಮೂಲಕ ಸ್ವಸ್ಥ ಸಮಾಜವನ್ನು ನಿರ್ಮಿಸಲು ಸಾಧ್ಯವೆಂದು ತಿಳಿಸಿದೆ. ಈ ಚಿಂತನೆಯನ್ನೇ ಮುಂದುವರೆಸುತ್ತಾ, ಇನ್ನೂ ಕೆಲವು ವಿಚಾರಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳಬಯಸುತ್ತೇನೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರಾರ್ಥನೆಯು ಅತ್ಯಂತ ವಿಶಿಷ್ಟವಾದುದು. ಮಕ್ಕಳ ಬೆಳವಣಿಗೆಗೆ ದೈಹಿಕ, ಮಾನಸಿಕ, ಸಾಮಾಜಿಕ, ನೈತಿಕ, ಭಾವನಾತ್ಮಕ ಮತ್ತು ಆಧ್ಯಾತ್ಮಿಕ ಮೌಲ್ಯಗಳು ಅವಶ್ಯಕವಾದುದ್ದು. ಇವುಗಳನ್ನು ಮಕ್ಕಳಲ್ಲಿ ಬೆಳೆಸುವುದು ಮತ್ತು ಕಾಪಾಡಿಕೊಂಡು ಬರುವ ಜವಾಬ್ದಾರಿಯನ್ನು ನಮ್ಮ ಸಂಸ್ಥೆಯು ಹೊತ್ತುಕೊಂಡಿದೆ. ಅದರಲ್ಲೂ, ಭಾರತದಂತಹ ವಿವಿಧ ಭಾಷೆ, ಸಂಸ್ಕೃತಿ, ಧರ್ಮ ಸಾಮಾಜಿಕ ಹಿನ್ನೆಲೆಯುಳ್ಳ ಸಮಾಜದಲ್ಲಿ ಸಾಮರಸ್ಯವನ್ನು ಕಾಪಾಡಿಕೊಂಡು ಪ್ರಗತಿಯನ್ನು ಸಾಧಿಸುವುದು ಮಹತ್ತರವಾದ ವಿಷಯ. ಆದುದರಿಂದಲೇ, ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಅತ್ಯಂತ ಸೂಕ್ತವಾದ ಪ್ರಾರ್ಥನೆಯನ್ನು ರೂಪಿಸಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರಾರ್ಥನೆ "ದಯಾ ಕರ್ ದಾನ್ ಭಕ್ತಿ ಕಾ . . . ." ಬಹಳ ಉದಾತ್ತವಾಗಿದೆ. "ನಮಗೆ ಭಕ್ತಿ-ಭಾವವನ್ನು ನೀಡು, ಆತ್ಮವನ್ನು ನಿರ್ಮಲಗೊಳಿಸು, ಸದಾ ನಮ್ಮ ನೆನಪಿನಲ್ಲಿದ್ದು, ಅಜ್ಞಾನವನ್ನು ಕಳೆದು ಜ್ಞಾನದ ಜ್ಯೋತಿಯನ್ನು ಬೆಳಗು, ನಮ್ಮ ಹೃದಯದಲ್ಲಿ ಪ್ರೀತಿಯು ತುಂಬಿದ್ದು, ಪರಸ್ಪರ ಒಲವಿನಿಂದ ಬದುಕುವುದನ್ನು ಕಲಿಸು, ಪರರ ಸೇವೆಯು ನಮ್ಮ ಕರ್ಮವಾಗಲಿ, ಧರ್ಮವಾಗಲಿ, ಸದಾ ಮಾನವ ಸೇವೆ, ಮಾತೃ ಭೂಮಿಗಾಗಿ, ಬಾಳಲು ಕಲಿಸು" ಎಂಬ ವ್ಯಾಕುಲತೆ ಪ್ರಾರ್ಥನೆಯಲ್ಲಿದೆ.

ನಮ್ಮ ಕೆಲವು ಜಿಲ್ಲಾ ಸಂಸ್ಥೆಗಳು ತಮ್ಮ ಚಟುವಟಿಕೆಗಳ ಬಗ್ಗೆ ವಾರ್ತಾ ಪತ್ರಿಕೆಯನ್ನು ಪ್ರಕಾಶಿಸುತ್ತಿವೆ. ಇದು ತುಂಬಾ ಸಂತೋಷದ ವಿಷಯ. ಜಿಲ್ಲೆಯ ಮಟ್ಟದಲ್ಲಿ ನಡೆಯುವ ಚಟುವಟಿಕೆಗಳು ಜಿಲ್ಲೆಯ ಸ್ಕೌಟ್ಸ್ / ಗೈಡ್ಸ್‌ಗಳನ್ನು ತಲುಪುತ್ತದೆ. ಚಟುವಟಿಕೆಗಳು ಅವರಲ್ಲಿ ಉತ್ಸಾಹವನ್ನು ತುಂಬುತ್ತದೆ ಜೊತೆಗೆ ಈ ವಾರ್ತಾ ಪತ್ರಿಕೆಗಳು ಮಾಹಿತಿಯನ್ನು ಪಸರಿಸುತ್ತವೆ. ಇತರರಿಗೆ ಸ್ಫೂರ್ತಿ ಮತ್ತು ಮಾರ್ಗದರ್ಶನವನ್ನು ನೀಡುತ್ತದೆ. ಜಿಲ್ಲಾ ವಾರ್ತಾ ಪತ್ರಿಕೆಗಳನ್ನು ಪ್ರಕಟಿಸುತ್ತಿರುವ ಜಿಲ್ಲಾ ಸಂಸ್ಥೆಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರು ಈ ಘನಕಾರ್ಯವನ್ನು ಮುಂದುವರಿಸಬೇಕು. ಇತರರು ಅವರನ್ನು ಅನುಸರಿಸಬೇಕೆಂಬುದು ನನ್ನ ಆಶಯವಾಗಿದೆ.



ಈ ತಿಂಗಳ ನಾಲ್ಕರಿಂದ ಎಂಟನೇ ತಾರೀಖಿನ ವರೆವಿಗೆ ನಾನು ಈಶಾನ್ಯ ಕರ್ನಾಟಕದ ಕೆಲವು ಪ್ರಮುಖ ಜಿಲ್ಲೆ / ತಾಲ್ಲೂಕು ಘಟಕಗಳಿಗೆ ಭೇಟಿ ನೀಡಿ ಅವರ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದೆ. ಮಕ್ಕಳ ಸ್ಕೌಟಿಂಗ್ ಚಟುವಟಿಕೆಗಳಲ್ಲಿ ಭಾಗವಹಿಸುವುದು ನನಗೆ ಅತ್ಯಂತ ತೃಪ್ತಿಯನ್ನು ನೀಡುವಂತಹದು. ಹಾವೇರಿಯಲ್ಲಿ ಸ್ಕೌಟರ್ / ಗೈಡರ್ ಸಮಾವೇಶ, ವಿಜಯಪುರದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳ ಭೇಟಿ, ಮಾರ್ಚ್ 03 ರಿಂದ 07, 2017ರವರೆಗೆ ಬಿದರ್ ಜಿಲ್ಲೆಯ ಪಬ್ಲಿಕ್ ಶಾಲೆಯಲ್ಲಿ ನಡೆದ ರಾಜ್ಯ ಮಟ್ಟದ ಸ್ಕೌಟರ್, ಗೈಡರ್, ರೋವರ್ / ರೇಂಜರ್‌ಗಳ ವಿಪತ್ತು ನಿರ್ವಹಣಾ ಶಿಬಿರಗಳಲ್ಲಿ ಭಾಗವಹಿಸಿದ್ದೆ. ಪ್ರವಾಹ, ಭೂಕಂಪ, ಅಗ್ನಿಆಕಸ್ಮಿಕ, ಅಪಘಾತ ಅಥವ ಇನ್ನಾವುದೇ ಪ್ರಾಕೃತಿಕ ಅಥವ ಮಾನವ ನಿರ್ಮಿತವಾದ ವಿಪತ್ತುಗಳನ್ನು ಎದುರಿಸಲು, ಜನರಿಗೆ ಸಹಾಯ ಮಾಡಲು ಸ್ಕೌಟರ್ಸ್, ಗೈಡರ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳನ್ನು ಈ ತರಬೇತಿ ಶಿಬಿರದಲ್ಲಿ ಸಿದ್ಧಪಡಿಸಲಾಯಿತು. ವಿಪತ್ತಿನ ಮುನ್ಸೂಚನೆ ಇದ್ದರೆ ಹೇಗೆ ಅದನ್ನು ಎದುರಿಸುವುದು, ವಿಪತ್ತಿನ ಸಂದರ್ಭದಲ್ಲಿ ಯಾವ ರೀತಿ ನಿರ್ವಹಣೆ ಮಾಡಬೇಕು, ವಿಪತ್ತಿನ ನಂತರ ಯಾವ-ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುದು ತರಬೇತಿಯ ತಿರುಳಾಗಿತ್ತು. ಎಲ್ಲಾ ಸ್ಥಳೀಯ ಪತ್ರಿಕೆಗಳು ಈ ಶಿಬಿರಕ್ಕೆ ವ್ಯಾಪಕವಾಗಿ ಪ್ರಚಾರ ನೀಡಿದ್ದು ಸಂತೋಷದ ವಿಷಯ. ದಿನಾಂಕ 7 ರಂದು ರಾಯಚೂರು, ಗಂಗಾವತಿ ಮತ್ತು ಗದಗ ಜಿಲ್ಲೆಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ.



ಬೀದರ್ ಜಿಲ್ಲಾ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತೆ ಶ್ರೀಮತಿ ಗುರಮ್ಮ ಸಿದ್ದಾರೆಡ್ಡಿರವರು ಜಿಲ್ಲಾ ಸಂಸ್ಥೆಗೆ ಒಂದು ನಿವೇಶನವನ್ನು ದೇಣಿಗೆಯಾಗಿ ನೀಡಿದ್ದಾರೆ. ಇದು ಅಪೂರ್ವವಾದ ಕೊಡುಗೆ. ಒಳ್ಳೆಯ ಕೆಲಸವನ್ನು ಮೆಚ್ಚಿ ಅದು ಸದಾಕಾಲವೂ ಮುಂದುವರೆಯಬೇಕೆಂದು ಬಯಸಿ ಸೂಕ್ತವಾದ ಅಧೋರಚನೆಯನ್ನು ಒದಗಿಸಿರುವುದು ಶ್ರೀಮತಿ ಗುರಮ್ಮ ಸಿದ್ದಾರೆಡ್ಡಿರವರ ದೂರದರ್ಶಿತ್ವಕ್ಕೆ ಸಾಕ್ಷಿಯಾಗಿದೆ. ಅವರಿಗೆ, ಅವರ ಕುಟುಂಬದ ಎಲ್ಲರಿಗೆ ನಾನು ಹೃತ್ಪೂರ್ವಕ ಧನ್ಯವಾದಗಳನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಅರ್ಪಿಸುತ್ತೇನೆ. ಶ್ರೀಮತಿ ಗುರಮ್ಮ ಸಿದ್ದಾರೆಡ್ಡಿರವರಂತಹ ದಾನಿಗಳು ಇನ್ನೂ ಹೆಚ್ಚಲಿ ಎಂದು ಪ್ರಾರ್ಥಿಸುತ್ತೇನೆ.

ಕರ್ನಾಟಕ ಸರ್ಕಾರವು ಮಾರ್ಚ್ 15 ರಂದು ತನ್ನ 2017–18ರ ವಾರ್ಷಿಕ ಆಯ–ವ್ಯಯವನ್ನು ವಿಧಾನ ಸಭೆಯಲ್ಲಿ ಮಂಡಿಸಿತು. ಕಳೆದ ವರ್ಷ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಗೆ ರೂ. 376 ಲಕ್ಷ ಅನುದಾನವನ್ನು ನಿಡಲಾಗಿತ್ತು. ಈ ವರ್ಷ ಅನುದಾನವು ರೂ.533 ಲಕ್ಷಕ್ಕೆ ಹೆಚ್ಚಿಸಲಾಗಿದೆ. ಕರ್ನಾಟಕ ಸರ್ಕಾರದ ಬೆಂಬಲಕ್ಕೆ ನಾನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಪರವಾಗಿ ಋಣಿಯಾಗಿದ್ದೇನೆ. ವಿಶೇಷವಾಗಿ ನಮ್ಮ ರಾಜ್ಯದ ಮುಖ್ಯ ಮಂತ್ರಿಗಳು ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಿದ್ದರಾಮಯ್ಯರವರಿಗೆ ನಮ್ಮ ಸಂಸ್ಥೆಯ ಪರವಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಸರ್ಕಾರವು ನಮ್ಮ ಸಕಾರಾತ್ಮಕ ಚಟುವಟಿಕೆಗಳನ್ನು ಗಮನಿಸಿ ಅನುದಾನವನ್ನು ಹೆಚ್ಚಿಸಿದೆ. ನಾವು ವಿರಮಿಸುವಂತಿಲ್ಲ. ಸಂಘಟನೆಯನ್ನು ವಿಸ್ತರಿಸುವ, ಬಲಪಡಿಸುವ, ಹೆಚ್ಚು–ಹೆಚ್ಚು ತರಬೇತಿ ಕಾರ್ಯಕ್ರಮಗಳನ್ನು ನಡೆಸುವ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯನ್ನು ಹೊಸ ಶತಮಾನದ ಸವಾಲುಗಳನ್ನು ಎದುರಿಸಲು ಸಮರ್ಥಗೊಳಿಸುವ ಜವಾಬ್ದಾರಿಯನ್ನು ನಿರ್ವಹಿಸಬೇಕು. ಈ ಕಾರ್ಯದಲ್ಲಿ ರಾಜ್ಯ / ಜಿಲ್ಲೆ / ತಾಲ್ಲೂಕು / ಸ್ಥಳಿಯ ಘಟಕಗಳ ಪದಾಧಿಕಾರಿಗಳು, ಶಿಕ್ಷಕರು, ಸ್ಕೌಟ್ಸ್/ ಗೈಡ್ಸ್/ ರೋವರ್ಸ್ /ರೇಂಜರ್ಸ್ ಹಾಗೂ ಎಲ್ಲಾ ಮಕ್ಕಳು ಮತ್ತು ಕಾರ್ಯಕರ್ತರುಗಳು ಉತ್ಸಾಹದಿಂದ ತೊಡಗಿಕೊಳ್ಳಬೇಕು.

ಮಾರ್ಚ್ ತಿಂಗಳಿನಲ್ಲಿ ನಮ್ಮ ತರಬೇತಿ ಕಾರ್ಯಕ್ರಮಗಳಿಗೆ ಅಲ್ಪ ವಿರಾಮ. ಎಲ್ಲಾ ತರಬೇತಿ, ಕಾರ್ಯಕ್ರಮಗಳು, ಶಿಬಿರಗಳು ಏಪ್ರಿಲ್‌ನಲ್ಲಿ ಪುನರಾರಂಭವಾಗಲಿವೆ. 2017–18ರ ಶೈಕ್ಷಣಿಕ ವರ್ಷದಲ್ಲಿ ಕರ್ನಾಟಕದಲ್ಲಿ ಸ್ಕೌಟ್ಸ್ ಗೈಡ್ಸ್ ಚಳವಳಿ ಬೆಳವಣಿಗೆಯು ಹಿಂದಿನ ದಾಖಲೆಗಳನ್ನು ಮುರಿಯುತ್ತದೆ ಎಂಬುದರಲ್ಲಿ ನನಗೆ ಅನುಮಾನವಿಲ್ಲ.



**ಈ ತಿಂಗಳ 29 ರಂದು ಯುಗಾದಿಯ ಹಬ್ಬ. ಹೇವಿಳಂಬಿ ಸಂವತ್ಸರದ ಆರಂಭ. ಹೊಸವರ್ಷವು ನಿಮಗೆಲ್ಲರಿಗೂ ಸಂತೊಷವನ್ನುಂಟುಮಾಡಲಿ, ಆರೋಗ್ಯ, ನೆಮ್ಮದಿ, ಸಂಪತ್ತು ಕೂಡಿ ಬರಲಿ ಎಂದು ನಾನು ಹಾರೈಸುತ್ತೇನೆ. ನಮ್ಮೊಡೊನೆ ಸ್ಕೌಟ್ ಸಂಸ್ಥೆಯು ಸಕಾರಾತ್ಮಕವಾಗಿ ಬೆಳೆಯುಲಿ, ನಾಡಿನ ಪ್ರಗತಿಯಾಗಲಿ ಎಂಬುದು ನಮ್ಮೆಲ್ಲರ ಹೆಬ್ಬಯಕೆಯಾಗಿದೆ.**

**"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ.**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು



# "SAVE WATER – SAVE BENGALURU" AWARENESS CAMPAIGN

## By Scouts, Guides, Rovers and Rangers



The Bengaluru Waer Supply and Sewerage Board organised the "Save Water – Save Bengaluru" Campaign in Association with the Bharat Scouts and Guides, Karnataka with the support and Cooperation of Bengaluru North and South District Association and other Non-Governmental Organization's throughout the year to take initiative to Educate more people and seek the support of Heads of Institutions, Unit Leaders, Scouts, Guides, Rovers, Rangers to promote the Campaign.

The Programme was organised on 20th March 2017 at "Kondajji Basappa Auditorium" at Shanthigruha, Bengaluru.

Sri B.K. Basavaraju, Joint Director of Public Instruction (School Education) Inaugurated the programme. In his address he appreciated the initiative undertaken by the Bharat Scouts and Guides, Karnataka in Association with the B.W.S.S.B. for propogating among the Public on "Save Water – Save Bengaluru" concept. Smt. T.C. Sarala Kumari, Public Relations Officer, B.W.S.S.B., in her introductory address spoke about the detailed programme on "Save Water – Save Bengaluru", Sri A.R. Shiva Kumar, Principal Scientific Officer and Principal, Investigator – RWH, Karnataka State Council for Science and Technology spoke about the importantance of "Save Water – Save Bengaluru" programme and presented a Power Point about the usage of Water. Smt. Sumangala Mammigatti, Programme Executive (Science) All India Radio, spoke about the Water conservation and its importance.



Sri P.G.R. Sindhia, State Chief Commissioner, Bharat Scouts and Guides, Karnataka addressed the gathering and requested the Heads of Institutions, Unit Leaders, Scouts, Guides, Rovers and Rangers to Associate with B.W.S.S.B. for the cause of "Save Water – Save Bengaluru" Campaign in the larger interest of the Social Service to propogate the need to save water in view of the acute draught situation prevailing in Karnataka State for the lasr three years.

Sri K.S. Melukote, President, Bird Tree International, Smt. D.S. Shamantha, Director, Sarathi (a Resource Centre for Communications), Sri .R.K.Ullas Kumar, Environment Journalist, ECO Watch participated in the programme. Literature, Posters on Save Wataer – Save Bengaluru were distributed to all the participants.

Sri M.A. Khalid, State Commissioner (Scouts), Sri Chinnaswamy Reddy, State Secretary, Smt. S.K. Prabha, Joint State Secretary (G), Sri P.Palani, Headquarters Commissioner (Scouts) Smt. P. Saroja, District Chief Commissioner, Bengaluru North, Sri Basava Prabhu M Patil, Life Member, BS&G were present in the programme. Sri M.K. Khan, District Chief Commissioner, Bengaluru South District presided over the function

Earlier Sri M.A. Chellaiah, Public Relations Officer, welcomed the Guests and participants Sri B.K. Seshadri, District Secretary, Bengaluru North District proposed Vote of thanks. Sri M. Prabhakar Bhat, SOC(S) conducted the Programme.

**Do What You can, do it with others and do it with passion.**



# Observance Of World Water Day




## On 22.03.2017 at Vidhana Soudha Scouts, Guides, Rovers, Rangers and NGO's Participated



The Bengaluru Water Supply and Sewerage Board in association with the Bharat Scouts and Guides, Karnataka and other N.G.O.'s organised the observance of World Water Day on 22.03.2017 infront of Vidhana Soudha.

Shri Siddaramaiah, Hon'ble Chief Minister of Karnataka inaugurated the programme **"Save Water – Save Bengaluru"** campaign on the occasion of the World Water Day. In his inaugural address he said "The state right now is going through a phase of severe drought, as a result of which there is shortage of drinking water in several places. Since water level reserve in Cauvery, Kabini and Hemavathi reservoirs is in record low level this year. Bengaluru, Mysuru, Mandya and Hassan are facing acute water shortage, for which all citizens should make serious efforts to use the available water cautiously". Hon'ble Chief Minister said "about 80% of water we get, turns into waste water. Countries like Australia, Israel and Singapore are role models for recycling Sewage Water and putting it to reuse.



Sri K.J. George, Hon'ble Minister for Bengaluru Development and Town Planning, Sri P.G.R. Sindhia, State Chief Commissioner, Bharat Scouts and Guides, Karnataka, Sri K. Lakshman, Chairman, Karnataka State Pollution Control Board, Sri Mahendra Jain, I.A.S., Additional Chief Secretary to Government, (Department of Urban Development), Government of Karnataka were present.

An Awarenes Route March was Flaged Offed by Hon'ble Chief Minister, from Vidhana Soudha. Nearly 500 Scouts, Guides, Rovers, Rangers, Unit Leaders along with other N.G.O.'s participated in the Route Rarch. The Route March passed through Vidhana Soudha, Gopalagowda Circle, K.R.Circle, Mysuru Bank Circle, Cauvery Bhavan, Hudson Circle, Kanteerava Stadium and ended at B.W.S.S.B. Water Treatment Plant.

Earlier Sri Tushar Girinath, I.A.S., Chairman, B.W.S.S.B., welcomed the Hon'ble Chief Minister, Guests and the participants. In his welcome address he said that the B.W.S.S.B. is conducting Water Awareness activities till may end to propogate the Save Water Save Bengaluru message, he said and also he thanked the Bharat Scouts and Guides and other N.G.O.'s for their active participation in the inaugural function and the awareness Route March.

Sri Kemparamaiah, Engineer in Chief, Sri Ramakrishna, Chief Engineer, (Waste Water Management), Sri H.M. Ravindra, Chief Engineer, (Maintenance), Dr.P.N.Ravindra, Additional Chief Engeneer, (New initative and Public Reach) Sri Sathish, Additional Chief Engineer, (Maintenance), Sri Ramanna, Financial Advisor and Sri K.H. Jagadish, Chief Administrative Officer, Smt Geetha Nataraj, State Commissioner (Guides), Sri Mohan Kumar Kondajji, Headquarters Commissioner (Projects), Sri P. Palani, Headquarters Commissioner (Scouts), Sri M.K. Khan, District Chief Commissioner, Bengaluru South District, Sri M.S. Sathish and B.K. Sheshadri, District Secretaries of Bengaluru South and North were present in the programme.

Smt. T.C. Saralakumari, Public Relations Offficer, B.W.S.S.B., Sri M.A. Chellaiah, Public Relations Officer, BS&G, Co-ordinated the event, assisted by Sri M. Prabhakar Bhat, State Org. Commissioner (Scouts) Bharat Scouts and Guides, Karnataka along with the Officials from the B.W.S.S.B.





# ವಿಶ್ವ ಮಹಿಳಾ ದಿನಾಚರಣೆ



ಮಹಿಳೆಯ ಸಭಲೀಕರಣಕ್ಕಾಗಿ "ಮಹಿಳಾ ದಿನಾಚರಣೆ"ಯನ್ನು ವಿಶ್ವದಾದ್ಯಂತ ಪ್ರತಿವರ್ಷ ದಿನಾಂಕ 8ನೇ ಮಾರ್ಚ್‌ರಂದು ಹಮ್ಮಿಕೊಳ್ಳಲಾಗುತ್ತಿದೆ. ಮಾರ್ಚ್ 8 ರಂದು ಮೊದಲಬಾರಿಗೆ ನ್ಯೂಯಾರ್ಕ್‌ನಲ್ಲಿರುವ ಸಿದ್ಧ ಉಡುಪು ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀಮತಿ ಕ್ಲಾರಾ ಜೆಟ್‌ಕಿನ್ ಎಂಬ ಮಹಿಳೆಯು, ಮಹಿಳೆ ಮತ್ತು ಪುರುಷರ ಮಧ್ಯೆ ಇರುವ ವೇತನ ತಾರತಮ್ಯವನ್ನು ವಿರೋಧಿಸಿ ಕಾರ್ಖಾನೆಯಿಂದ ಹೊರಬಂದು ಸ್ತ್ರೀಪರ ಹೋರಾಟಕ್ಕೆ ನಾಂದಿಹಾಡಿದರು. ಅಂದಿನಿಂದ ಇಂದಿನವರೆಗೂ ಸಾಕಷ್ಟು ಹೋರಾಟಗಳು ನಡೆಯುತ್ತಿದ್ದರೂ ಮಹಿಳೆಯ ಸ್ಥಿತಿ-ಗತಿ, ಸ್ಥಾನ-ಮಾನ, ಇನ್ನೂ ಸುಧಾರಿಸುವ ನಿಟ್ಟಿನಲ್ಲಿ ಮಂದಗತಿಯಲ್ಲಿ ಸಾಗುತ್ತಿದೆ. ಈ ವಿಶ್ವಚಳವಳಿಯ ಉದ್ದೇಶವು ಯುವತಿಯರ ಸಬಲೀಕರಣಕ್ಕಾಗಿ ವಿಶ್ವದಾದ್ಯಂತ ಶ್ರಮಿಸುವುದಾಗಿದೆ.



ಅಂದು ಬೆಳಗ್ಗೆ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ರವರೊಂದಿಗೆ ಶ್ರೀಮತಿ ಎಸ್.ಕೆ.ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್), ಶ್ರೀಮತಿ ಸಿ.ಮಂಜುಳ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್), ಶ್ರೀಮತಿ ಕೆ.ವಿ.ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ಶ್ರೀಮತಿ ರಾಧಾ ವೆಂಕಟೇಶ್, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಬಿ.ಡಿ.ಶಾಂತ, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಹೀರೋಜಿ, ಇವರುಗಳ ಗುಂಪು ಸರಳ ಉಡುಗೊರೆಯೊಡನೆ ಮೂರು ವೃದ್ಧಾಶ್ರಮಗಳಿಗೆ ಭೇಟಿನೀಡಿ ಅವರೊಡನೆ ಸಂಭಾಷಣೆಮಾಡಿ ಅವರಿಗೆ ಉಡುಗೊರೆಯನ್ನು ನೀಡಲಾಯಿತು. ಬೆಳಗ್ಗೆ 11.00 ಗಂಟೆಗೆ ಲಿಟರ್ ಸಿಸ್ಟರ್ಸ್ ಆಫ್ ಚಾರಿಟಿ, ಹೊಸೂರು ರಸ್ತೆಗೆ ಭೇಟಿ ನೀಡಿ 120 ವೃದ್ಧರೊಡನೆ ಮಾತುಕತೆ ನಡೆಸಲಾಯಿತು.



12 ಗಂಟೆಗೆ ಘೋಷ ಆಸ್ಪತ್ರೆಯ ವಾರ್ಡ್‌ಗಳಿಗೆ ಭೇಟಿ ನೀಡಿ, ಅವರೊಡನೆ ಮಾತನಾಡಿ, ಉಡುಗೊರೆ ನೀಡಿ, ಅವರೆಲ್ಲರೂ ಬೇಗ ಗುಣಮುಖಹೊಂದಲಿ ಎಂದು ಹಾರೈಸಲಾಯಿತು.

ಸುಮಾರು 1.30ಕ್ಕೆ ಹೆಚ್.ಎ.ಎಲ್.ನಲ್ಲಿ ಶ್ರೀಮತಿ ಸರ್ವಮಂಗಳಮ್ಮರವರು ನಡೆಸುತ್ತಿರುವ ಶಾಂಭವಿ ಮಹಿಳಾ ಆಶ್ರಮವನ್ನು ತಲುಪಿದೆವು. ಅಲ್ಲಿಯೂ ಕೂಡ ವೃದ್ಧರೊಂದಿಗೆ, ಮಕ್ಕಳೊಂದಿಗೆ ಮಾತನಾಡಿ, ಉಡುಗೊರೆಯನ್ನು ನೀಡಲಾಯಿತು.

ಮಹಿಳಾ ದಿನಾಚರಣೆ ಕಾರ್ಯಕ್ರಮದ ಅಂಗವಾಗಿ ಮಾರ್ಚ್ 23ರಂದು "ಬದಲಾವಣೆಗಾಗಿ ದಿಟ್ಟ ನಡೆ" ಎಂಬ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಶ್ರೀಮತಿ

ನಿರ್ಮಲ ಎಲಿಗಾರ್, ಸಹನಿರ್ದೇಶಕರು, ದೂರದರ್ಶನ, ಬೆಂಗಳೂರು, ಶ್ರೀಮತಿ ಕೆ. ರತ್ನಪ್ರಭ, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ರವರು ಆಗಮಿಸಿ ವಾಕ್‌ಥಾನ್‌ಗೆ ಹಸಿರು ನಿಶಾನೆ ತೋರಿಸಿದರು ಹಾಗೂ ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಅವರ ಅಧ್ಯಕ್ಷತೆಯಲ್ಲಿ ಮಹಿಳೆಯರ ಸಬಲೀಕರಣಕ್ಕೆ ಅವಶ್ಯಕವಾದ ವಿಷಯಗಳನ್ನು ಕುರಿತು ಶ್ರೀಮತಿ ಕೆ.ರತ್ನ ಪ್ರಭ, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಮತ್ತು ಶ್ರೀಮತಿ ನಿರ್ಮಲ ಎಲಿಗಾರ್, ಸಹನಿರ್ದೇಶಕರು, ದೂರದರ್ಶನ, ಬೆಂಗಳೂರು, ರವರು ಮಾತನಾಡಿದರು. ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರವರು ಮಹಿಳಾ ಸಬಲೀಕರಣಕ್ಕೆ ಸರ್ಕಾರ, ಪುರುಷ ಸಮುದಾಯ, ಎಲ್ಲರ ಬೆಂಬಲವಿದೆ. ನಾನೂ ಕೂಡ ಸ್ತ್ರೀ ಸಬಲೀಕರಣ, ದೇಶ ಹಾಗು ವಿಶ್ವದ ನೆಮ್ಮದಿಗೆ ಅಗತ್ಯವೆಂದು ಭಾವಿಸಿ ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗಿದ್ದೇನೆ ಎಂದು ತಿಳಿಸಿ, ಸ್ತ್ರೀಯರೆಲ್ಲ ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದರು.

ಈ ಕಾರ್ಯಕ್ರಮದಲ್ಲಿ ಗೈಡ್ಸ್‌ಗಳ ಜೊತೆಗೆ ಸುಮಂಗಲಿ ಸೇವಾಶ್ರಮದ ಮಕ್ಕಳು, ಸ್ನೇಹಾ ಕೂಟದ ಮಹಿಳೆಯರು, ಶಾಂಭವಿ ಸಂಸ್ಥಾಪಕಿಯವರು, ಮದರ್ಸ್ ಟಚ್ ಹಾಗೂ ಅಖಿಲ ಭಾರತ ಮಹಿಳಾ ಸಮಾವೇಶದ ಬೆಂಗಳೂರು ವಿಭಾಗದ ಕಾರ್ಯದರ್ಶಿ, ಸದಸ್ಯರುಗಳು ಮತ್ತು ಸ್ನೇಹಿತರು, ಹಿತೈಷಿಗಳು ಭಾಗವಹಿಸಿದ್ದರು.

ಮಹಾರಾಣಿ ಕಾಲೇಜಿನಿಂದ ಹೊರಟ ವಾಕಥಾನ್ ಕೆ.ಆರ್.ಸರ್ಕಲ್, ಕಬ್ಬನ್ ಪಾರ್ಕ್, ಎಂ.ಎಸ್.ಕಟ್ಟಡದ ಮೂಲಕ ಮರಳಿ ಬಂದಿತು. ಈ ಪಥಸಂಚಲನವು ಆಕರ್ಷಕವಾದ ಫಲಕ ಮತ್ತು ಘೋಷಣೆಗಳಿಂದ ಕೂಡಿತ್ತು.



ವಾಕ್‌ಥಾನ್‌ನಿಂದ ಬಂದ ನಂತರ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಸಮಾರೋಪ ಸಮಾರಂಭವನ್ನು ನಡೆಸಲಾಯಿತು. ವೇದಿಕೆಯ ಮೇಲೆ ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಶ್ರೀಮತಿ ಸರ್ವಮಂಗಳಮ್ಮ, ಶ್ರೀಮತಿ ರೇಣುಕ, ಶ್ರೀಮತಿ ಸುಶೀಲಮ್ಮ ಮತ್ತು ಸಂಸ್ಥೆಯ ಮಹಿಳಾ ಪದಾಧಿಕಾರಿಗಳು ಆಸೀನರಾಗಿದ್ದರು. ಈ ಕಾರ್ಯಕ್ರಮವು ಶ್ರೀಮತಿ ಸರೋಜ ವಿ. ನಾಯ್ದು, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಇವರ ಅಧ್ಯಕ್ಷತೆಯಲ್ಲಿ ನಡೆಯಿತು.

ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್), ಕಾರ್ಯಕ್ರಮದ ಸಂಚಾಲಕರಾಗಿದ್ದರು. ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್) ರವರು ಎಲ್ಲರನ್ನೂ ಆತ್ಮೀಯವಾಗಿ ಸ್ವಾಗತಿಸಿದರು. ಶ್ರೀಮತಿ ಸರ್ವಮಂಗಳ ಮತ್ತು ವೇದಿಕೆ ಮೇಲಿದ್ದ ಗಣ್ಯರೆಲ್ಲರೂ ಸೇರಿ ದೀಪ ಬೆಳಗಿಸುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶ್ರೀಮತಿ ಎಸ್.ಕೆ.ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿರವರು ಪ್ರಾಸ್ತಾವಿಕ ನುಡಿಯನ್ನು ನುಡಿದರು.

ಶ್ರೀಮತಿ ಸರ್ವಮಂಗಳಮ್ಮರವರು ಮಾತನಾಡುತ್ತಾ ಮಹಿಳೆಯರು ಸಾಧನೆಯ ಹಾದಿಯಲ್ಲಿದ್ದೇವೆ. ಆದರೆ, ಸಾಧಿಸಬೇಕಾದ್ದು ಬೆಟ್ಟದಷ್ಟಿದೆ. ನಮ್ಮತನವನ್ನು ಕಾಪಾಡಿಕೊಂಡು ಎಲ್ಲಾ ಕ್ಷೇತ್ರದಲ್ಲೂ ಮಹಿಳೆಯರು ಮುನ್ನುಗ್ಗಬೇಕೆಂದು ಕರೆ ನಿಡಿದರು.

ವಿಶೇಷವಾಗಿ ಯುವತಿಯರಿಬ್ಬರನ್ನು ಸನ್ಮಾನಿಸಲಾಯಿತು. ಕುಮಾರಿ ಅಶ್ವಿನಿ ಅಂಗಡಿ, ದೃಷ್ಟಿ ವಂಚಿತೆ, ಇವರ ಸಾಧನೆ ಎಲ್ಲರಲ್ಲಿಯೂ ಅಚ್ಚರಿ ಮತ್ತು ಆನಂದವನ್ನು ಮೂಡಿಸಿತು. ಈಕೆ ಸ್ವತಂತ್ರ್ಯವಾಗಿ 30 ದೃಷ್ಟಿವಂಚಿತ ಮಕ್ಕಳ ಶಾಲೆಯನ್ನು ನಡೆಸುತ್ತಿದ್ದಾರೆ. ಹಾಗೆ ಯುವತಿಯರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇದಕ್ಕಾಗಿ ಅವರಿಗೆ

ಲಂಡನ್‌ನಲ್ಲಿ "ಶೌರ್ಯ ಪ್ರಶಸ್ತಿ"ಯನ್ನು ನೀಡಲಾಯಿತು. ಈ ಬೆಳೆಯುವ ಸಾಧಕಿಗೆ ಶ್ರೀಮತಿ ಸರ್ವಮಂಗಳಮ್ಮರವರು ರೂ.10,000/-ಗಳನ್ನು ನೀಡಿದರು ಹಾಗೂ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ತಮ್ಮ ಕೈಲಾದ ಸಹಾಯವನ್ನು ಮಾಡುವುದಾಗಿ ಆಶ್ವಾಸನೆ ನೀಡಿದರು. ಅಲ್ಲಿ ಬಂದ ಹಲವು ಸಂಘ-ಸಂಸ್ಥೆಗಳು ಅವರನ್ನು ತಮ್ಮ ಸಂಸ್ಥೆಯ ಕಾರ್ಯಕ್ರಮಗಳಿಗೆ ಸ್ವಾಗತಿಸಿದರು. ಸಭಿಕರೆಲ್ಲರೂ ಮನ:ತುಂಬಿ ಅಶ್ವಿನಿ ಅಂಗಡಿಗೆ ಹಾರೈಸಿದರು.

ಇದೇ ರೀತಿ ಮತ್ತೊಂದು ಎಳೆಯ ಪ್ರತಿಭೆ ಕುಮಾರಿ ಅನ್ವಿತ ಅವರನ್ನು ಸನ್ಮಾನಿಸಲಾಯಿತು. ಇವರು ಸ.ರಿ.ಗ.ಮ.ಪ. ಲಿಟಲ್ ಚಾಂಪಿಯನ್ಸ್ ಕಾರ್ಯಕ್ರಮದ ವಿಜೇತೆಯಾಗಿರುವರು. ಹಾಗೆಯೇ ಅವರಿಗೆ ಅಂತಿಮವಾಗಿ ವಿಜಯ ತಂದುಕೊಟ್ಟ ಗೀತೆಯಾದ "ನಾದಮಯ ...... "ಎಂಬ ಗೀತೆಯನ್ನು ಹಾಡಿ ಎಲ್ಲರಿಗೂ ಆನಂದವನ್ನು ಉಂಟುಮಾಡಿದರು. ಎಲ್ಲರೂ ಇವರನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಸಂಗೀತ ಪ್ರತಿಭೆಯಾಗಿ ಬೆಳಯಲಿ ಎಂದು ಹಾರೈಸಿದರು.

ಶ್ರೀಮತಿ ರೇಣುಕ, ಶ್ರೀಮತಿ ಸುಶೀಲರವರುಗಳು ಮಾತನಾಡಿ ಮಹಿಳೆಯರಿಗೆ ಮತ್ತು ಯುವತಿಯರಿಗೆ ಪ್ರೇರಣೆ ನೀಡುವುದಲ್ಲದೆ, ತಮ್ಮ ಅನುಭವವನ್ನು ಹಂಚಿಕೊಂಡು ಸಬಲರಾಗುವತ್ತ ಹೆಜ್ಜೆ ಹಾಕಿ ಸಾಮಾಜಿಕ ಕಾರ್ಯಕ್ರಮಗಳಲ್ಲಿ, ಮಹಿಳಾ ಹೋರಾಟದಲ್ಲಿ ಒಗ್ಗಟ್ಟಿನಿಂದ ಭಾಗವಹಿಸಿ ಎಂದು ಎಲ್ಲರಿಗೂ ಶುಭವನ್ನು ಹಾರೈಸಿದರು. ಎಲ್ಲಾ ಅತಿಥಿಗಳನ್ನು ವೇದಿಕೆಯಲ್ಲಿ ಸನ್ಮಾನಿಸಲಾಯಿತು. ಶ್ರೀಮತಿ ಬಿ. ರೇವತಿ, ಎಲ್‌ಟಿ(ಬಿ) ಮತ್ತು ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್)ರವರು ಆಹ್ವಾನಿತರನ್ನು ವಂದಿಸಿದರು.

## ಎಲ್ಲಿ ಹೋದರು ಕಿಲಕಿಲ ನಕ್ಕವರು

ಎಲ್ಲಿ ಹೋದರು ಇವರು
ನಿನ್ನೆ ಮೊನ್ನೆ ಇಲ್ಲೆ ಇದ್ದವರು
ರಸ್ತೆ ತುಂಬಾ ಆಡುತ್ತಿದ್ದವರು
ಹುಡುಕು ಹುಡುಕು
ಎಲ್ಲಿ ಕಿಲಕಿಲ ನಕ್ಕು ಗೆದ್ದವರು

ಅಂಗಡಿಗೆ ಅಕ್ಕಪಕ್ಕದ ಮನೆಗೆ
ಅರಿಷಿಣ ಕುಂಕುಮಕೆ,
ದಾರಿ ತಪ್ಪಿತೋ
ಮುಂಬೈನ ಪೇಟೆ ಬಲು ದೊಡ್ಡದು
ಭಾರತವೇ ಈಗ ಮುಂಬೈ ಬೈ ಬೈ

ಫೋಟೋ ಇದ್ದರೆ ಕೊಡಿ ವಿವರವೂ ಇರಲಿ
ಕೈಲಾದ್ದು ಮಾಡುತ್ತೇವೆ
ಕಳೆದುಹೋದವರು ಅರವತ್ತು ಲಕ್ಷ
ಸಂಸದರು ಕೇಳಿದರೆ
ಮಂತ್ರಿಗಳ ಉತ್ತರ

ಭಯಭೀತೆ ಭಯಕಿತ್ತೇ ಹೋದಳೆ
ಬಸ್ಸಿನಲಿ ಮಧ್ಯರಾತ್ರಿ
ಮದ್ಯದ ಅಮಲಿನಲಿ ಮುಚ್ಚಿದರೆ ಕೂಗು
ಆಲಿಸಿ ಊರೂರು ಕೇರಿಯಲೂ

ಕೇಳುತಿದೆಯಲ್ಲ ಅವಳಧ್ವನಿ
ಸಂಸತ್ತು ನಿಟ್ಟುಸಿರು ಬಿಟ್ಟಿದೆ
ನಿರ್ಭಯಾ ಈಗ ನಿರ್ಭೀತ

"ಯತ್ರ ನಾರ್ಯೇಸ್ತು . . . . ."
ಹ್ಞಾ. . .ಇದು ನಮ್ಮದೆ ಹಾಡು
ಗುಡಿಯಲಿಟ್ಟೆವು ತೃಪ್ತಿಯಾಗಿ,
ದೃಷ್ಟಿಯಾದೀತು ಹೊರಗೆ

ಅನುಮಾನದ ಪಿಶಾಚಿ
ನಾ ಸತ್ತರೆ, ಸಾಯುವುದಿಲ್ಲವೇ
ತಿಥಿ, ತರ್ಪಣ, ಪಿತೃಲೋಕ ಮೋಕ್ಷ
ಬೇಡವೆ ಅನುತಾಪ ನಮಗಾಗಿ
ತಪ್ಪಿದೆ ಅನುಪಾತ ; ಗೆಳತಿ
ಹುಟ್ಟುವ ಮುನ್ನ ಮಸಣದ ಮನೆಗೆ

ಬೆಳೆದಿದ್ದಾನೆ ಮೀರುತ್ತಿದೆ ಪ್ರಾಯ
ಯಾರಾದರೂ ನನ್ನ ಮಗನಿಗೊಂದು
ಹೆಣ್ಣು ಕೊಡಿ, ವಂಶ ಬೆಳೆಯಬೇಡವೆ

**ಅಂತಾರಾಷ್ಟ್ರೀಯ ಮಹಿಳಾ ದಿನದ ಶುಭಾಶಯಗಳು**

ಬೆಂ ಶ್ರೀ ರವೀಂದ್ರ



# "ಚಿಂತನಾ ದಿನಾಚರಣೆ"

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ದಿನಾಂಕ 22.02.2017 ರಂದು ಶಾಂತಿಗೃಹ, ಬೆಂಗಳೂರು ಇಲ್ಲಿ ಬೆಡೆನ್ ಪಾವೆಲ್ ದಂಪತಿಗಳ ಹುಟ್ಟು ಹಬ್ಬ ಮತ್ತು ಚಿಂತನಾ ದಿನಾಚರಣೆ – ವಿಶ್ವಭ್ರಾತತ್ವ ದಿನಾಚರಣೆಯನ್ನು ಸಂಘಟಿಸಲಾಗಿತ್ತು.

ಬೆಳಿಗ್ಗೆ 9 ಗಂಟೆಗೆ ಕಾರ್ಯಕ್ರಮ ಧ್ವಜಾರೋಹಣದೊಂದಿಗೆ ಪ್ರಾರಂಭವಾಯಿತು. ಶ್ರೀಮತಿ ಎಸ್.ಕೆ. ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿ ಇವರು ಈ ದಿನದ ಮಹತ್ವ, ಬೇಡೆನ್ ಪಾವೆಲ್ ದಂಪತಿಗಳ ಕಿರು ಪರಿಚಯ, ಕಾರ್ಯಕ್ರಮದ ಉದ್ದೇಶವನ್ನು ಮಕ್ಕಳಿಗೆ ತಿಳಿಸಿದರು.

ಮಧ್ಯಾಹ್ನದ ಅವಧಿಯ ಮುಕ್ತಾಯ ಸಮಾರಂಭದಲ್ಲಿ ರೋವರ್ಸ್ ರೇಂಜರ್ಸ್, ಸ್ಕೌಟ್ಸ್, ಗೈಡ್ಸ್ ಈ ದಿನದ ವಿಶೇಷತೆಯನ್ನು ಭಾಷಣದ ಮೂಲಕ ತಿಳಿಸಿಕೊಟ್ಟರು.



ಬೆಂಗಳೂರು ಉತ್ತರ ಜಿಲ್ಲೆಯ ಗೈಡ್ಸ್‌ಗಳು ದೇಶ ಭಕ್ತಿ ಗೀತೆಯನ್ನು ನೃತ್ಯದ ಮೂಲಕ ಪ್ರಸ್ತುತಪಡಿಸಿದರು.

ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ದೀಪ ಬೆಳಗಿಸಿ ಬೇಡೆನ್ ಪಾವೆಲ್ ದಂಪತಿಗಳ ಭಾವ ಚಿತ್ರಕ್ಕೆ ಪುಷ್ಪ ನಮನವನ್ನು ಸಲ್ಲಿಸಿ ಮಾತನಾಡಿ ಮಕ್ಕಳಿಗೆ ಬೆಡೆನ್ ಪಾವೆಲ್ ದಂಪತಿಗಳ ಆದರ್ಶ, ಕೊಡುಗೆ, ಕೌಶಲ್ಯಗಳ ಬಗ್ಗೆ ಹಾಗೂ ಚಿಂತನಾ ದಿನದ ಉದ್ದೇಶ "ಬೆಳೆಸಿ" ಸಂಸ್ಥೆಯ ಉತ್ತಮ ಮೌಲ್ಯಗಳನ್ನು ಬೆಳೆಸುವ ಬಗ್ಗೆ ತಿಳಿಸಿದರು.

ಶ್ರೀ ಕೊಂಡಜ್ಜಿ ಬಿ ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು ಪ್ರತಿಜ್ಞೆಯನ್ನು ಬೋಧಿಸಿದರು. ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಸಂಸ್ಥೆ ಉಪಾಧ್ಯಕ್ಷರು ಮಕ್ಕಳೊಂದಿಗೆ ಸಂವಾದವನ್ನು ನಡೆಸಿ ಸ್ಕೌಟಿಂಗ್/ಗೈಡಿಂಗ್ ಅಭಿರುಚಿಗಳು ಮತ್ತು ಕೌಶಲ್ಯಗಳನ್ನು ಮೈಗೂಡಿಸಿಕೊಳ್ಳಲು ಸೂಚಿಸಿದರು.

ಶ್ರೀಮತಿ ಎಸ್.ಕೆ. ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿ ಇವರು ಚಿಂತನಾ ದಿನಾಚರಣೆಯ ಉದ್ದೇಶ ಮತ್ತು ವಿವರಗಳನ್ನು ತಿಳಿಸಿಕೊಟ್ಟರು, ಶ್ರೀಮತಿ ಗೀತಾ ನಟರಾಜ್ ಸರ್ವರಿಗೂ ಅಭಿನಂದಿಸಿ ಸ್ಪರ್ಧೆಗಳಲ್ಲಿ ವಿಜೇತರಾದ ಮಕ್ಕಳಿಗೆ ಬಹುಮಾನ ವಿತರಿಸಲಾಯಿತು. ವೇದಿಕೆಗಳಲ್ಲಿ ರಾಜ್ಯ ಸಂಸ್ಥೆಯ ಎಲ್ಲ ಪದಾಧಿಕಾರಿಗಳು, ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಸದರಿ ಆಚರಣೆಯಲ್ಲಿ ಬನ್ನೀಸ್‌ಗಳಿಗೆ **Action Song,** ಕಬ್ಸ್ ಬುಲ್‌ಬುಲ್ಸ್‌ಗಳಿಗೆ ಚಿತ್ರಕಲಾ ಸ್ಪರ್ಧೆ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಷ್ಟ್ರೀಯ ಭಾವೈಕ್ಯತಾ ಗೀತಗಾಯನ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಇಲ್ಲಿ 25 ಬನ್ನೀಸ್, 102 ಕಬ್ಸ್ ಬುಲ್‌ಬುಲ್ಸ್, 303 ಸ್ಕೌಟ್ಸ್, ಗೈಡ್ಸ್ ಹಾಗೂ 41 ರೋವರ್ಸ್ ರೇಂಜರ್ಸ್‌ಗಳು ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಯಿಂದ ಭಾಗವಹಿಸಿರುತ್ತಾರೆ.

# ರಾಜ್ಯ ಮಟ್ಟದ ವಿಪತ್ತು ನಿರ್ವಹಣಾ ತರಬೇತಿ ಶಿಬಿರ

ಮಾರ್ಚಿ 3 ರಿಂದ 7 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಹಾಗೂ ಬೀದರ್ ಜಿಲ್ಲಾ ಸಂಸ್ಥೆ ವತಿಯಿಂದ ಮಿಲೇನಿಯಂ ಪಬ್ಲಿಕ್ ಶಾಲೆ, ಬೀದರ್ ಜಿಲ್ಲೆಯಲ್ಲಿ ವಿ.ಪಿ. ದೀನದಯಾಳು ನಾಯ್ಡು ರವರ ಜನ್ಮ ಶತಮಾನೋತ್ಸವ ಪ್ರಯುಕ್ತ ರಾಜ್ಯಮಟ್ಟದ ಸ್ಕೌಟರ್-ಗೈಡರ್ ಹಾಗೂ ರೋವರ್-ರೇಂಜರ್‌ಗಳಿಗೆ ವಿಪತ್ತು ನಿರ್ವಹಣಾ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು.



ಶಿಬಿರದ ಉದ್ಘಾಟನಾ ಸಮಾರಂಭ ಶ್ರೀಮತಿ ರತ್ನಾಕುಮಾರ್, ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬೀದರ್ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀಮತಿ ಭಾರತ ಬಾಯಿ, ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಶಿಬಿರವನ್ನು ಉದ್ಘಾಟಿಸಿದರು. ಪೂಜ್ಯ ಶ್ರೀ ಜ್ಯೋತಿರ್ಮಯಾನಂದ ಸ್ವಾಮಿಜಿ, ರಾಮಕೃಷ್ಣ ವಿವೇಕಾನಂದ ಆಶ್ರಮ, ಬೀದರ್ ಇವರು ದಿವ್ಯ ಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಶ್ರೀ ರಹೀಮ್ ಖಾನ್, ಶಾಸಕರು, ಬೀದರ್, ಶ್ರೀ ಅಬ್ದುಲ್ ಖಾದಿರ್, ಶಾಹೀನ್ ಸಂಸ್ಥೆ ಬೀದರ್, ಶ್ರೀಮತಿ ಗುರಮ್ಮಾ ಸಿದ್ದಾರೆಡ್ಡಿ, ಜಿಲ್ಲಾ ಮುಖ್ಯ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಪ್ರಭಾತ ಕಲ್ಕೂರ, ಸಂಪನ್ಮೂಲ ವ್ಯಕ್ತಿಗಳು ಶಿಬಿರದ ಉದ್ದೇಶವನ್ನು ತಿಳಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಶಿಬಿರದ ಮುನ್ನೋಟ ನೀಡಿದರು. ಶ್ರೀ ಶೇಖ್ ಮುಸ್ತಾನಾ ಆಲಿ ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ಭರಶೆಟ್ಟಿ ಎಚ್.ಬಿ, ಜಿಲ್ಲಾ ಸಂಘಟನಾ ಆಯುಕ್ತರು, ವಂದಿಸಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ರೋವರ್-ರೇಂಜರ್ ವಿಪತ್ತಿನ ಸಂದರ್ಭದಲ್ಲಿ ಸೇವೆ ಸಲ್ಲಿಸಲು ಬೇಕಾದ ಅಗತ್ಯ ಕೌಶಲ್ಯಗಳನ್ನು ಪಡೆದಿರಬೇಕು. ಇಂತಹ ತರಬೇತಿಗಳನ್ನು ರಾಜ್ಯದಾದ್ಯಂತ ನಡೆಸಿ ಉತ್ತಮ ಸೇವಾ ತಂಡವನ್ನು ರಾಜ್ಯದಲ್ಲಿ ಸಂಘಟಿಸಲಾಗುವುದೆಂದು ತಿಳಿಸಿದರು. ಹಿರೇಮಠ್ ಸಂಸ್ಥಾನ ಬಾಲ್ಕಿಯ ಪೂಜ್ಯ ಮ.ಘ.ಚ. ಬಸವಲಿಂಗ ಪಟ್ಟದ್ದೇವರು, ಭಾಗವಹಿಸಿ ಆಶೀರ್ವಚನ ನೀಡಿದರು. ಶ್ರೀ ಸಂಜಯ ಜಾಗಿರದಾರ, ಬುಡಾ ಅಧ್ಯಕ್ಷರು, ಬೀದರ್, ಶ್ರೀ ಪ್ರಕಾಶ್ ಪಾಟೀಲ್ ಉಪಾಧ್ಯಕ್ಷರು, ಬೀದರ್, ಶ್ರೀಮತಿ ಶಾಲಿನಿ ಚಿಂತಾಮಣಿ, ಬೀದರ್ ನಗರ ಸಭೆಯ ಉಪಾಧ್ಯಕ್ಷರು. ಶ್ರೀಮತಿ ರತ್ನಾ ಪಾಟೀಲ್ ಪ್ರಾಂಶುಪಾಲರು, ಸಿದ್ದಾರೂಡ ಪಬ್ಲಿಕ್ ಸ್ಕೂಲ್ ಬೀದರ್, ಶ್ರೀಮತಿ ಅನುರಾಧಾ ಆರ್ ಗಾದಾ, ಜಂಟಿ ಕಾರ್ಯದರ್ಶಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೀದರ್ ಇವರು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಗುರಮ್ಮಾ ಸಿದ್ದಾರೆಡ್ಡಿ, ಜಿಲ್ಲಾ ಮುಖ್ಯ ಆಯುಕ್ತರು, ಬೀದರ್ ಪ್ರಸ್ತಾವಿಕ ಭಾಷಣ ಮಾಡಿದರು. ಶ್ರೀಮತಿ ಲೀಲಾವತಿ ಚಕೋತೆ, ಜಿಲ್ಲಾ ಗೈಡ್ ಆಯುಕ್ತರು, ಶೇಖ್ ಮುಸ್ತಾಕ್ ಆಲಿ, ಜಿಲ್ಲಾ ಕಾರ್ಯದರ್ಶಿ, ಶ್ರೀ ಶರೀಫ್, ಮುಖ್ಯ ಅಗ್ನಿಶಾಮಕ ಅಧಿಕಾರಿಗಳು, ಕಲ್ಬುರ್ಗಿ, ಶ್ರೀ ಮುಜಾಹಿದ್ದಿನ ಪಾಟೀಲ್, ಮುಖ್ಯ ಅಗ್ನಿಶಾಮಕ ಅಧಿಕಾರಿಗಳು, ಬೀದರ್ ಶ್ರೀಮತಿ ಶಾಂತಿಕುಮಾರಿ, ನಾಯಕರು ರೇಂಜರ್ ವಿಭಾಗ ಇವರು ಉಪಸ್ಥಿತರಿದ್ದರು. ಶ್ರೀ ಭರಶೆಟ್ಟಿ, ಸ್ವಾಗತಿಸಿದರು, ಶ್ರೀ ರವಿನಾಯಕ್, ರೋವರ್ ಲೀಡರ್ ಶಿಬಿರದ ವರದಿ ನೀಡಿದರು, ಶ್ರೀ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ವಂದಿಸಿದರು.

ಶಿಬಿರದಲ್ಲಿ 15 ಜಿಲ್ಲೆಗಳಿಂದ 132 ರೋವರ್, ರೇಂಜರ್, 52 ಸ್ಕೌಟರ್ಸ್, 22 ಗೈಡರ್ ಭಾಗವಹಿಸಿದ್ದರು. ಶ್ರೀ ರವಿ ನಾಯಕ್, ರೋವರ್ ಲೀಡರ್, ರೋವರ್ ವಿಭಾಗಕ್ಕೆ ಶ್ರೀಮತಿ ಶಾಂತಿ ಕುಮಾರಿ ರೇಂಜರ್, ವಿಭಾಗಕ್ಕೆ, ಇವರುಗಳು ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದ್ದರು.






# 17ನೇ ರಾಷ್ಟ್ರೀಯ ಜಾಂಬೂರಿಯ ಸವಿನೆನಪುಗಳು

ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ. (ಗೈಡ್ಸ್)
ರಾಜ್ಯ ಜಂಟಿ ಕಾರ್ಯದರ್ಶಿ

ಹಿಂದಿನ ಸಂಚಿಕೆಯಿಂದ...



**ಜಾಂಬೂರಿಯಲ್ಲಿ ಚಟುವಟಿಕೆಗಳ ಚಿತ್ತಾರ:** 25 ಸಾವಿರ ಮಕ್ಕಳು! ಈ ಮೆಗಾ ಸಂಖ್ಯೆಯ ಮಕ್ಕಳಿಗೆ ಏನು ಚಟುವಟಿಕೆ ಮಾಡಿಸ್ತೀರಿ! ಹೇಗೆ ಮಾಡಿಸ್ತೀರಿ! ಎಂಬ ಪ್ರಶ್ನೆ ಸಾಮಾನ್ಯವಾಗಿತ್ತು. ಸುಮಾರು 40 ಚಟುವಟಿಕೆಗಳನ್ನು ಆಯೋಜಿಸಲಾಗಿತ್ತು. ಇವುಗಳ ಒಟ್ಟಾರೆ ಉದ್ದೇಶ ಜೀವನ ಶಿಕ್ಷಣ, ಜೀವನ ಕೌಶಲ, ಜೀವನ ಮೌಲ್ಯಗಳ ಪ್ರತ್ಯಕ್ಷ ಹಾಗು ಪೂರಕ ಅನುಭವ ನೀಡುವುದಾಗಿತ್ತು. ಬದುಕುವ ಕಲೆಯ ದರ್ಶನವನ್ನು ಮಾಡುವುದಾಗಿತ್ತು. ಎಲ್ಲಾ ರಾಜ್ಯಕ್ಕೂ ಚಟುವಟಿಕೆಗಳ ವೇಳಾಪಟ್ಟಿ ನೀಡಲಾಗಿತ್ತು ಪ್ರತಿ ರಾಜ್ಯಕ್ಕೆ ಪ್ರತಿ ಚಟುವಟಿಕೆಗೆ ಸ್ಕೌಟ್-ಗೈಡ್‌ಗಳ ಸಂಖ್ಯೆ ನಿಗದಿ ಮಾಡಲಾಗಿತ್ತು. ಪ್ರತಿ ಚಟುವಟಿಕೆಯು ಏಕಕಾಲದಲ್ಲಿ ನಡೆಯುವಂತೆ ಜಾಂಬೂರಿಯ ಅಂಗಳದ ವಿವಿಧ ಭಾಗಗಳಲ್ಲಿ ಚಟುವಟಿಕೆಗಳನ್ನು ಸಿದ್ಧಗೊಳಿಸಲಾಗಿತ್ತು. ಮಕ್ಕಳು ಉಪಹಾರದನಂತರ ಹಿರಿಯ ನಾಯಕ ನಾಯಕಿಯರೊಡನೆ ಸಮವಸ್ತ್ರ ಧರಿಸಿ ತೆಲೆಗೆ ಜಾಂಬೂರಿ 'ಪಿ' ಕ್ಯಾಪ್ ಧರಿಸಿ ಸಾಮಾನುಗಳನ್ನು ಹೊತ್ತು ಆಸಕ್ತಿಯಿಂದ ಹೆಜ್ಜೆ ಹಾಕುತ್ತಾ ತಮಗೆ ಗೊತ್ತು ಪಡಿಸಿದ ಚಟುವಟಿಕೆಯ ಸ್ಥಳವನ್ನು ತಲುಪುತ್ತಿದ್ದರು. ಚಟುವಟಿಕೆಯಲ್ಲಿ ತೊಡಗಿದಾಗ ಅವರ ತನ್ಮಯತೆ ಸ್ಫೂರ್ತಿ ಕಂಡು ನೋಡುಗರು ಬೆರಗಾಗುತ್ತಿದ್ದರು. ಒಂದು ಘಂಟೆಯವರೆಗೆ ಚಟುವಟಿಕೆ ಮುಗಿಸಿ ತಮ್ಮ ತಮ್ಮ ಶಿಬಿರಕ್ಕೆ ಭೋಜನಕ್ಕಾಗಿ ಮರಳುತ್ತಿದ್ದರು. ಅವರವರ ಅನುಭವವನ್ನು ತಪ್ಪದೆ ಪರಸ್ಪರ ಹಂಚಿಕೊಳ್ಳುತ್ತಿದ್ದರು. ಊಟ ಮುಗಿದ ನಂತರ ಪುನಃ 2.30ಕ್ಕೆ ಚಟುವಟಿಕೆಗಳಲ್ಲಿ ಭಾಗವಹಿಸಲು ಸಾಗುತ್ತಿದ್ದರು, ಸತತವಾಗಿ ಚುರುಕಾಗಿರುವ ಜೇನುನೊಣಗಳಂತೆ ಸ್ಕೌಟ್ಸ್-ಗೈಡ್ಸ್‌ಗಳು ಸದಾ ಚಟುವಟಿಕೆಯಲ್ಲಿ ತೊಡಗಿರುತ್ತಿದ್ದರು.

**ಬೆಳಗಿನ ಅವಧಿಯ ಚಟುವಟಿಕೆಗಳು: ಪಥ ಸಂಚಲನ:** ಪ್ರತಿ ರಾಜ್ಯದಿಂದ 32 ಸ್ಕೌಟ್ ಮಕ್ಕಳು ಮತ್ತು ಗೈಡ್ ಮಕ್ಕಳು ರಾಜ್ಯಗಳ ಸರತಿಗೆ ಅನುಗುಣವಾಗಿ ಭಾಗವಹಿಸಿದ್ದರು. ಪಥಸಂಚಲನವನ್ನು ಬಹಳ ಶಿಸ್ತಿನಿಂದ ಮಾಡಿದರು. ಎಲ್ಲರ ಮೆಚ್ಚುಗೆಗೆ ಪಾತ್ರರಾದರು.



**ದೈಹಿಕ ವ್ಯಾಯಾಮ ಪ್ರದರ್ಶನ:** ಪ್ರತಿ ರಾಜ್ಯದಿಂದ 24 ಸ್ಕೌಟ್ಸ್ ಮತ್ತು 24 ಗೈಡ್ಸ್ ಮಕ್ಕಳು ಭಾಗವಹಿಸುತ್ತಿದ್ದರು. ಈ ಪ್ರದರ್ಶನವನ್ನು ವಾದ್ಯಘೋಷ ಅಥವಾ ಸಂಗೀತ ಸಹಿತ ನೀಡುತ್ತಿದ್ದರು. ಇದರಲ್ಲಿ ವ್ಯಾಯಾಮ/ಅಂಗಸಾಧನ ಕೌಶಲಗಳ ಪ್ರದರ್ಶನಕ್ಕೆ ಅವಕಾಶವಿತ್ತು.

**ವಾದ್ಯಘೋಷ:** ಪ್ರತಿ ರಾಜ್ಯದಿಂದ ಒಂದು ಸ್ಕೌಟ್ ಮತ್ತು ಒಂದು ಗೈಡ್ ತಂಡ ಭಾಗವಹಿಸುತ್ತಿದ್ದರು. ಅವರು ಸ್ಕೌಟ್-ಗೈಡ್ ಸಮವಸ್ತ್ರದಲ್ಲಿ ಭಾಗವಹಿಸಬೇಕಾದುದು ಕಡ್ಡಾಯವಾಗಿತ್ತು. ಸಮವಸ್ತ್ರದ ಜೊತೆಗೆ ವಿಶಿಷ್ಟ ಅಲಂಕರಣವನ್ನು ಧರಿಸುವ ಅವಕಾಶವಿತ್ತು.

**ಧ್ವಜದಳ:** ಪ್ರತಿ ರಾಜ್ಯದಿಂದ ಒಂದು ತಂಡ 3 ಸ್ಕೌಟ್-2 ಗೈಡ್ / 3 ಗೈಡ್-2 ಸ್ಕೌಟ್ ಭಾಗವಹಿಸಿ ಎಡಕ್ಕೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ ಮತ್ತು ಬಲಕ್ಕೆ ರಾಷ್ಟ್ರಧ್ವಜವನ್ನು ಹಿಡಿದು ಮಾರ್ಚ್ ಮಾಡುತ್ತಿದ್ದರು.

ಈ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ಮಕ್ಕಳಿಗೆ ಸಮಯ ಪ್ರಜ್ಞೆ, ದೇಹ ಮನಸ್ಸಿನ ಸಮನ್ವಯ, ಏಕಾಗ್ರತೆ, ಶಿಸ್ತು, ಆಜ್ಞಾಪಾಲನೆ, ಧೈರ್ಯ, ಶೌರ್ಯ ಸಧೃಢ ಕಾಯ ಮತ್ತು ಮನಸ್ಸು, ರಾಷ್ಟ್ರಾಭಿಮಾನ ಅಭಿವೃದ್ಧಿಗೊಳ್ಳುತ್ತದೆ.

**ರಾಜ್ಯ ವಸ್ತು ಪ್ರದರ್ಶನ:** ರಾಜ್ಯದ ಕೃಷಿ, ರೇಷ್ಮೆ, ತೋಟಗಾರಿಕೆ, ಸಿ.ಎಫ್.ಟಿ.ಆರ್.ಐ, ಎಚ್.ಎ.ಎಲ್, **Air force** ಭೂಸೈನ್ಯ, **ISRO**, ಕನ್ನಡ ಮತ್ತು ಸಂಸ್ಕೃತಿ, ಇಲಾಖೆ, ವಾಕ್‌ಶ್ರವಣ ಸಂಸ್ಥೆ, ಪ್ರವಾಸೋದ್ಯಮ, ರೈಲ್ವೆ, ಅಗಸ್ತ್ಯ ವಿಜ್ಞಾನ ಸಂಸ್ಥೆ, ಮಡಿಕೆ ಕೌಶಲ, ಕೆ.ಎಸ್.ಜೆ.ಸಿ, ಅಂತರರಾಷ್ಟ್ರೀಯ ಸ್ಕೌಟ್ಸ್-ಗೈಡ್ಸ್ ಬೃಹತ್ ಆಕರ್ಷಕ ವಸ್ತು ಪ್ರದರ್ಶನ ಮಳಿಗಳಿಗೆ ಸ್ಕೌಟ್ಸ್-ಗೈಡ್ಸ್ ಮಕ್ಕಳು ನಿರಂತರವಾಗಿ ಭೇಟಿ ನೀಡುತ್ತಾ ಆಸಕ್ತಿಯಿಂದ ವೀಕ್ಷಿಸುತ್ತಾ ತಮ್ಮ ಕನಸುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಇವರಿಗೂ ಇದೊಂದು ಮಾಹಿತಿ ಮಾರ್ಗದರ್ಶನ ಮತ್ತು ಸ್ಫೂರ್ತಿ ನೀಡುವ ಜ್ಯೋತಿಯಾಗಿತ್ತು.



ಈ ಚಟುವಟಿಕೆಗಳಲ್ಲಿ ಸ್ಪರ್ಧಿಸಲು ಮಕ್ಕಳು ಮತ್ತು ಶಿಕ್ಷಕರು ಕನಿಷ್ಠವೆಂದರೆ ಎರಡು ಮೂರು ತಿಂಗಳಾದರೂ ಅಭ್ಯಾಸ ಮಾಡಿದ್ದರು. ಗೆಲ್ಲುವ ಆಸೆ ಹೊತ್ತು ಬಂದಿದ್ದರು. ಶಿಕ್ಷಕರು ಮಕ್ಕಳು ಪ್ರತಿ ಚಟುವಟಿಕೆಯಲ್ಲಿ ಭಾಗವಹಿಸುವಾಗ ಆತಂಕದ ಗೂಡಾಗಿರುತ್ತಿದ್ದರು. ಮಕ್ಕಳು ಕಣಕ್ಕಿಳಿಯುವಾಗ ಆತಂಕ ಹೊಂದಿದ್ದರೂ ಇಳಿದ ಮೇಲೆ ಕೈಲಾದದ್ದು ಮಾಡಿ ಹೊರ ಬೀಳುತ್ತಿದ್ದರು. ಚೆನ್ನಾಗಿ ಮಾಡಿದ್ದೇವೆ! ಸುಮಾರು! ಇನ್ನೂ ಚೆನ್ನಾಗಿ ಮಾಡಬೇಕಿತ್ತು! ಹೀಗೆ ತಮ್ಮ ತಮ್ಮ ಶಿಕ್ಷಕರನ್ನು ಸುತ್ತುವರಿದು ಮಾತನಾಡುತ್ತಿದ್ದರು.

**ಸಮುದಾಯ ಅಭಿವೃದ್ಧಿ ಕಾರ್ಯ:** ಸ್ಕೌಟ್-ಗೈಡ್‌ಗಳು ತಂಡೋಪ ತಂಡವಾಗಿ ಸುತ್ತೆಂಟು 5 ಕಿ.ಮೀ ದೂರದ ಒಳಗಿರುವ ಹಳ್ಳಿಗೆ ಹೋಗಿ ಅಲ್ಲಿ ತಮ್ಮ ಕೈಲಾದ ಸೇವೆ ಸಲ್ಲಿಸಿದರು. ಇದರಿಂದ ಸೇವೆ ಮಾತ್ರವಲ್ಲದೆ ಹಳ್ಳಿಯ ಜನಜೀವನ, ಸ್ಥಿತಿಗತಿ, ಸಂಸ್ಕೃತಿಗಳ ಪರಿಚಯವಾಯಿತು. ಹಳ್ಳಿಗರು ವಿವಿಧ ರಾಜ್ಯಗಳ ಮಕ್ಕಳೊಡನೆ ಬೆರೆತು ಆನಂದ ಪಟ್ಟರು.

ಮೈಸೂರು ದರ್ಶನ: ಪಾರಂಪಾರಿಕ ಐತಿಹಾಸಿಕ ಅರಮನೆಯ ನಗರಿಯ ಸಂದರ್ಶನಕ್ಕೆ 50 ರಿಂದ 75 ಬಸ್ಸುಗಳು ಸಿದ್ಧವಾಗಿರುತ್ತಿದ್ದವು. ಅವರವರಿಗೆ ಗೊತ್ತು ಪಡಿಸಿದ, ಬಸ್ಸಿನಲ್ಲಿ ಸ್ಕೌಟ್-ಗೈಡ್‌ಗಳು ಕುಳಿತು ನಗರ ದರ್ಶನ ಮಾಡಿ ಆನಂದಿಸಿದರು. ಈ ವ್ಯವಸ್ಥೆಯನ್ನು ಎಲ್ಲರೂ ಬಹುವಾಗಿ ಮೆಚ್ಚಿಕೊಂಡರು ಇದಕ್ಕಾಗಿ ಕರ್ನಾಟಕ ರಾಜ್ಯ ಸಾರಿಗೆ ನಿಗಮಕ್ಕೆ ನಮ್ಮ ರಾಜ್ಯ ಸಂಸ್ಥೆ ಋಣಿಯಾಗಿದೆ. ಬೆಳಿಗ್ಗೆ ಹೋದ ಮಕ್ಕಳು ಮೈಸೂರು ದರ್ಶನ ಮುಗಿಸಿ ಸಂಜೆ ಮರಳಿ ಬರುತ್ತಿದ್ದರು. ಅವರ ಇತಿಹಾಸ ಪುಟಗಳಿಗೆ ಒಡೆಯರ ರಾಜಮನೆತನದ ವೈಭವ ಸೇರ್ಪಡೆಯಾಗಿರುತಿತ್ತು.

ಸ್ಕೌಟ್-ಗೈಡ್ ರಾಜ್ಯಗಳ ವಸ್ತು ಪ್ರದರ್ಶನ: 32 ರಾಜ್ಯಗಳು ಈ ಪ್ರದರ್ಶನದಲ್ಲಿ ಭಾಗವಹಿಸಿದ್ದವು. ಪ್ರತಿ ರಾಜ್ಯಕ್ಕೂ ಒಂದು ಮಳಿಗೆ ನೀಡಲಾಗಿತ್ತು. ಅದರಲ್ಲಿ ಅವರವರ ರಾಜ್ಯದ ಕರಕೌಶಲ, ಸ್ಕೌಟ್-ಗೈಡ್ ಕೌಶಲ, ಮಾಹಿತಿ ಹಾಗೂ ವಿಶೇಷತೆಗಳನ್ನು ಪ್ರದರ್ಶಿಸಲಾಗಿತ್ತು. ನಿರಂತರವಾಗಿ ಬೆಳಿಗ್ಗೆ 10 ಘಂಟೆಯಿಂದ ಸಂಜೆ 7 ಘಂಟೆವರೆಗೂ ಮಕ್ಕಳು ಭೇಟಿ ನೀಡುತ್ತಿದ್ದರು. ಅವರಿಗೆ ಆಕರ್ಷಕವಾಗಿ ಹೊಸ ವಿಚಾರ, ಮಾಹಿತಿ ಹಾಗೂ ಅನುಭವಗಳು ದೊರೆಯುತ್ತಿದ್ದವು.

**ಮಧ್ಯಾಹ್ನದ ಚಟುವಟಿಕೆಗಳು:**



**ಸಾಂಸ್ಕೃತಿಕ ಮೆರವಣಿಗೆ:** ಪ್ರತಿ ರಾಜ್ಯವು ತನ್ನ ರಾಜ್ಯದ ವೇಷಭೂಷಣ ಧರಿಸಿ, ಜಾನಪದ, ಐತಿಹಾಸಿಕ, ಸಾಂಸ್ಕೃತಿಕ ಪ್ರದರ್ಶನಗಳನ್ನು ನೀಡುತ್ತಾ ವಾದ್ಯ ಘೋಷ ಮಾಡುತ್ತಾ ಮೆರವಣಿಗೆಯಲ್ಲಿ ಸಾಗುತ್ತಿದ್ದರು. ಇದು ಕಣ್ಣಿಗೆ ಹಬ್ಬವನ್ನು ಉಂಟು ಮಾಡುತ್ತಿತ್ತು. ಪ್ರತಿ ರಾಜ್ಯವು ಸಾಗುತ್ತಿರುವಾಗ ಅದರ ವಿಶೇಷತೆ ಕುರಿತು ಆ ರಾಜ್ಯದಿಂದ ಒಬ್ಬರು ವೀಕ್ಷಕ ವಿವರಣೆಯನ್ನು ಹೇಳುತ್ತಿದ್ದರು. ಪ್ರತಿಯೊಬ್ಬರಿಗೂ ಒಂದೇ ಪ್ರಾಂಗಣದಲ್ಲಿ 52 ರಾಜ್ಯಗಳ ವೈವಿಧ್ಯತೆ ಜೊತೆಗೆ ವಿದೇಶಿಯರ ವಿಶೇಷತೆ ಸೇರಿ ಅಚ್ಚರಿ ಉಂಟಾಯಿತು. ವ್ಹಾವ್! ಈ ವೈವಿಧ್ಯತೆಯ ಮೆರವಣಿಗೆಯಲ್ಲಿ ಏಕತೆ ಹಾಗೂ ಭಾರತೀಯತೆ ಕಂಡು ಹೆಮ್ಮೆ ಎನ್ನಿಸಿತು.



**ವಿಶ್ವ ಪರ್ಯಟನೆ:** ಪ್ರತಿ ರಾಜ್ಯಕ್ಕೂ ಪ್ರಪಂಚದಲ್ಲಿನ ಒಂದು ದೇಶ ನೀಡಲಾಗಿತ್ತು. ಆ ರಾಜ್ಯವು ಆದೇಶದ ಭೂಗೋಳ ಇತಿಹಾಸ, ಕಲೆ, ಸಂಸ್ಕೃತಿ, ಸ್ಕೌಟ್-ಗೈಡ್ ಮಾಹಿತಿ ಮತ್ತು ವಿಶೇಷತೆಗಳನ್ನು ಜಾಲತಾಣದಿಂದ ತಗೆದು ವೈವಿಧ್ಯಮಯವಾಗಿ ಪ್ರದರ್ಶಿಸ ಬೇಕಿತ್ತು. ಉಡಿಗೆ ತೊಡಿಗೆ ತಿನಿಸುಗಳು ಇದಕ್ಕೆ ಹೊರತಾಗಿರಲಿಲ್ಲ. 18 ರಾಜ್ಯಗಳು ಈ ಸ್ಪರ್ಧೆಯಲ್ಲಿ ಭಾಗವಹಿಸಿದ್ದವು. ಈ ಮಳಿಗೆಗಳನ್ನು ನೋಡುವ ಸ್ಕೌಟ್-ಗೈಡ್ ಹಾಗೆಯೇ ಮಳಿಗೆಯನ್ನು ಪ್ರವೇಶಿಸುವಂತಿರಲಿಲ್ಲ ಅಲ್ಲಿದ್ದ ವೀಸಾ ಕಛೇರಿಗೆ ಹೋಗಿ ಪಾಸ್ ಪೋರ್ಟ್‌ನಲ್ಲಿ ವೀಸಾ ಸ್ಟಾಂಪ ಮಾಡಿಸಿಕೊಳ್ಳಬೇಕಿತ್ತು. ಮಕ್ಕಳ ಸಂಭ್ರಮ ಹೇಳತೀರದು. ಅಲ್ಲಿಂದಿಲ್ಲಿಗೆ ಓಡಾಡುತ್ತಾ ನಾನು ಇಷ್ಟು ದೇಶ ನೋಡಿದೆ ನಾನು ಅಷ್ಟು ದೇಶ ನೋಡಿದೆ ಎಂದು ಹೆಗ್ಗಳಿಕೆಯಿಂದ ಹೇಳಿಕೊಳ್ಳುತ್ತಿದ್ದರು ಮಕ್ಕಳ ಮನಸ್ಸು ವಿಶ್ವದಗಲಕ್ಕೆ ವಿಸ್ತಾರಗೊಂಡು ವೈಶಾಲ್ಯತೆಯಿಂದ ಮೆರೆಯಿತು. ವಿನೂತನ ಅನುಭವ ನೀಡಿತು.

**ಆಹಾರ ಮಹಾ ಮೇಳ:** ನಮ್ಮ ರಾಷ್ಟ್ರ ವೈವಿಧ್ಯತೆಗೆ ಹೇಳಿ ಮಾಡಿಸಿದ ದೇಶ ಆಹಾರವು ಅದಕ್ಕೆ ಹೊರತಲ್ಲ. ಎಲ್ಲಾ ರಾಜ್ಯಗಳು ಆಹಾರವನ್ನು ಉತ್ತಮ ರೀತಿಯಲ್ಲಿ ಪ್ರದರ್ಶಿಸಿದವು. ಆಕಾರ, ಬಣ್ಣ, ವಾಸನೆ, ರುಚಿ ಆಹಾರ ಶೃಂಗರಿಸಿ ಜೋಡಿಸಿದ ರೀತಿ ಎಲ್ಲರ ಬಾಯಲ್ಲೂ ನೀರುರಿಸುತ್ತಿತ್ತು. ಆಯಾ ರಾಜ್ಯದ ಪ್ರತಿ ನಿಧಿಗಳು ಸಂದರ್ಶಕರನ್ನು ಉಪಚರಿಸುತ್ತಾ ಆಹಾರವನ್ನು ತಿನ್ನಲು ಕೊಡುತ್ತಿದ್ದರು.  ಎಲ್ಲರಿಗೂ ರುಚಿ ನೋಡಿನೋಡಿ ಸಾಕಾಯಿತು. ಒಟ್ಟಿನಲ್ಲಿ ಆಹಾರ ಮೇಳ ಎಲ್ಲರ ನಾಲಿಗೆಯನ್ನು ಮನವನ್ನು ತಣಿಸಿತು. ಕೆಲವು ಹೊಸರುಚಿಗಳನ್ನು ಆಸಕ್ತರು ಕೇಳಿ ಕಲಿತರು.

**ಸಾಹಸ ಶಿಖರ:** ಈ ಶಿಖಿರ ಪ್ರವೇಶಿಸುತ್ತಿದಂತೆಯೆ ಮಕ್ಕಳು ಆನಂದಿತರಾಗುತ್ತಿದ್ದರು. ಬಹುಪಾಲು ಮಕ್ಕಳು ನಾನು ಹತ್ತುತ್ತೇನೆ, ನಡೆಯುತ್ತೇನೆ, ದಾಟುತ್ತೇನೆ ತೂಗುತ್ತೇನೆ, ತಿರುಗುತ್ತೇನೆ ಎಂದು ಮುನ್ನುಗುತ್ತಿದ್ದರು. ಇವರನ್ನು ನಿಯಂತ್ರಿಸಿ ವ್ಯವಸ್ಥೆ ಮಾಡುವುದೇ ಅಲ್ಲಿನ ವ್ಯವಸ್ಥಾಪಕರಿಗೆ ಕಷ್ಟವಾಗುತ್ತಿತ್ತು. ಆದರೆ ಕೆಲವು ಮಕ್ಕಳು ಭಯ ಪಟ್ಟು ಹಿಂದೆ ಸರಿಯುತ್ತಿದ್ದರು. ಒಮ್ಮೆ ಅಂತಹವರನ್ನು ಹುರುದುಂಬಿಸಿ ಸಾಹಸದಾಟದಲ್ಲಿ ತೊಡಗಿಸಿದರೆ ಅವರಿಗೆ ಧೈರ್ಯ ಬಂದು ಆಟ ಬಿಟ್ಟು ಹೋಗುವ ಮನಸ್ಸೇ ಇರುತ್ತಿರಲಿಲ್ಲ. ಇಲ್ಲಿ ಅನೇಕ ಪ್ರಾಜೆಕ್ಟ್‌ಗಳನ್ನು ರಚಿಸಲಾಗಿತ್ತು. ವಿವಿಧ ರೀತಿಯ ಸೇತುವೆ, ವಿಕ್ಷಣಾಗೋಪುರಗಳು, ಗಿರಿಗಿಟ್ಟೆಗಳು, ತೂಗುವ ಸಾಧನಗಳು, ಸುರಂಗಗಳನ್ನು ರಚಿಸಲಾಗಿತ್ತು, ದಾಟುವ ಸಾಧನಗಳನ್ನು ರಚಿಸಲಾಗಿತ್ತು. ಟೈರ್‌ಗೋಡೆ ಇತ್ಯಾದಿ. ಸುಮಾರು (50 ಪ್ರಾಜೆಕ್ಟ್ ಗಳನ್ನು ಕಟ್ಟಲಾಗಿತ್ತು) ತಂಡಕ್ಕೆ ಕೊಟ್ಟ ಅವಧಿಯಲ್ಲಿ ಅವರು ಎಷ್ಟು ಬೇಕಾದರೂ ಆಟ ಆಡಬಹುದಾಗಿತ್ತು. ಈ ಚಟುವಟಿಕೆ ಧೈರ್ಯವಂತರನ್ನು ಮತ್ತೂ ಧೈರ್ಯವಂತರಾಗಿ ಮಾಡಿ, ಧೈರ್ಯವಿಲ್ಲದವರನ್ನು ಧೈರ್ಯವಂತರನ್ನಾಗಿ ಮಾಡುವುದಾಗಿತ್ತು. ಅಬ್ಬಾ! ಮೊದಲು ಹೆದರಿಕೆಯಾಯಿತು, ಒಂದು ಸಲ ಹತ್ತಿದ ಮೇಲೆ ಧೈರ್ಯ ಬಂತು ನೋಡು, "ಧೈರ್ಯ ಮಾಡಿ ಎಷ್ಟೊಂದು ಆಟ ಆಡಿದೆ" ಅಂತ ಮಕ್ಕಳು ಹೇಳುವಾಗ ಈ ಚಟುವಟಿಕೆ ಮಾಡಿಸಿದ್ದಕ್ಕೆ ಸಾರ್ಥಕವೆನ್ನಿಸಿತು.



**ಬದುಕಿಗಾಗಿ ಕಲಿಯಿರಿ:** ಈ ಕಾರ್ಯಕ್ರಮವನ್ನು ಸುಂದರವಾಗಿ ಸಜ್ಜಾದ ಜಾಂಬೂರಿ ಗ್ರಾಮದಲ್ಲಿ ನಡೆಯಿತು. ಇಲ್ಲಿ ಮಾದರಿ ತಯಾರಿಕೆ, ಕುಂಬಾರಿಕೆ, ವಿವಿಧ ರೀತಿಯ ವರ್ಣ ಚಿತ್ರ ರಚನೆ, ಆರಿಗೆಮಿ, ಕಸದಿಂದ ರಸ, ಯಕ್ಷಗಾನ, ರಂಗೋಲಿ, ಚಾಪೆ ಹೆಣೆಯುವುದು, ಹಾಮ್‌ರೇಡಿಯೊ, ಕಂಪ್ಯೂಟರ್ ಪರಿಚಯ, ಯೋಗ, ಕವುಂಗರ ತಯಾರಿಕೆ ಇತ್ಯಾದಿಯನ್ನು ಸ್ಕೌಟ್ಸ್-ಗೈಡ್ಸ್‌ಗಳು ತಾವೇ ಕಚ್ಚಾವಸ್ತುಗಳನ್ನು ತಂದು ಮಾಡುತ್ತಿದ್ದರು. ಈ ಗ್ರಾಮದೃಶ್ಯ ಸೊಗಸಾಗಿ ಮೂಡಿ ಬಂದಿತ್ತು ಅದರಲ್ಲಿ ತನ್ಮಯರಾಗಿ ಕೆಲಸವನ್ನು ಮಾಡುತ್ತಿದ್ದ ಮಕ್ಕಳನ್ನು ನೋಡುವುದು ಒಂದು ಸೊಗಸು ನೋಡುಗರಿಗೆ ಮಕ್ಕಳು ಇಷ್ಟೆಲ್ಲಾ ಚೆನ್ನಾಗಿ ಕೆಲಸ ಮಾಡುತ್ತಾರಾ ಎಂಬ ಅಚ್ಚರಿ ಉಂಟು ಮಾಡುತ್ತಿತ್ತು. ಇದನೆಲ್ಲಾ ನೋಡುತ್ತಾ " ಬದುಕಲು ಎಷ್ಟೆಲ್ಲಾ ಕಲಿತರು ಸಾಲದು ಎನ್ನಿಸುತ್ತಿತ್ತು.

**ಮಸ್ತ ಮಜಾ ಮಾಡಿ:** ಬಿಲ್ಲುಗಾರಿಕೆ, ಬೆಲೂನ್ ಊದುವುದು, ಚಂಡು-ಕೊಟ್ಟೆ, ಕಿಮ್ಸ್‌ನ ಆಟ, ಕಣ್ಣು ಕಟ್ಟಾಟ, ಶ್ರವಣ, ದೃಶ್ಯ ಚಟುವಟಿಕೆಗಳು ಇದನ್ನು ಮಕ್ಕಳು ಚೆನ್ನಾಗಿ ಆಡಿ ಆನಂದಿಸಿ ಮಜಾ ಮಾಡಿದರು.

**ಭಾವೈಕ್ಯತಾ ಆಟ:** ಬೇರೆ ರಾಜ್ಯದ ಒಂದೆರಡು ಭಾಷೆಯ ಅಕ್ಷರ ಕಲಿಯಿರಿ, ಬೇರೆ ರಾಜ್ಯದ ಅಡಿಗೆ ಕಲಿಯಿರಿ, ಬೇರೆ ಭಾಷೆಯ ಹಾಡು ಕಲಿತು, ಹಾಡಿ, ವಿವಿಧ ರಾಜ್ಯ ಭಾಷೆಗಳಲ್ಲಿ ನಿಮ್ಮ ಹೆಸರು ಬರೆಯಿರಿ. ಬೇರೆ ರಾಜ್ಯದ ಜಾನಪದ ನೃತ್ಯ ಕಲಿಯಿರಿ, ಈ ಚಟುವಟಿಕೆಯಿಂದ ಭಾವೈಕ್ಯತೆ ಮೂಡುತ್ತದೆ ನಾವು ಭಾರತೀಯರೆಂಬ ಭಾವನೆ ಬಲಗೊಳ್ಳುತ್ತದೆ.

**ಸ್ನೇಹ ಸೇತು:** ಕನಿಷ್ಠ ಬೇರೆ ರಾಜ್ಯದ 10 ಸ್ಕೌಟ್ ಮತ್ತು ಗೈಡ್‌ಗಳೊಡನೆ ಮಾತಾಡಿ ಸ್ನೇಹ ಬೆಳಸಿ ಅವರ ಹೆಸರು ವಿಳಾಸ, ರಾಜ್ಯ ಬರೆದುಕೊಂಡು ಅವರ ಸಹಿ ಪಡೆಯಿರಿ, ಅವರ ಸಂಪರ್ಕ ಇಟ್ಟುಕೊಳ್ಳಿ.

**ರಸ ಪ್ರಶ್ನೆ:** ಈ ಸುತ್ತಿನಲ್ಲಿ 25 ಪ್ರಶ್ನೆಗಳಿದ್ದವು, 35 ರಾಜ್ಯದ 2 ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಮೊದಲನೆ ಲಿಖಿತ ಸುತ್ತಿನಲ್ಲಿ ಭಾಗವಹಿಸಿದ್ದರು ಅವರಲ್ಲಿ 5 ರಾಜ್ಯಗಳನ್ನು ಮೌಖಿಕ ಹಾಗೂ ಅಂತಿಮ ಸುತ್ತಿಗೆ ಆಯ್ಕೆ ಮಾಡಲಾಯಿತು. ಈ ಸುತ್ತಿನಲ್ಲಿ 1 ಪ್ರಶ್ನೋತ್ತರ, 2 ಶ್ರವಣ, 3 ದೃಶ್ಯ, 4 ಪ್ರಾತ್ಯಕ್ಷಿಕೆ, 5 ಪ್ರದರ್ಶನ ಸುತ್ತುಗಳಿದ್ದವು. ಈ ಚಟುವಟಿಕೆಯನ್ನು ಮಕ್ಕಳು ಆಸಕ್ತಿಯಿಂದ ಮಾಡಿದರು. ಇದನ್ನು ಮಾಡಿದ ನಂತರ ಮಕ್ಕಳು ರಸ ಪ್ರಶ್ನೆ ಹೊಸ ಮಾದರಿಯಲ್ಲಿತ್ತು. ಬಿ.ಪಿಯವರು ಕಲಿತಾ ಮಾರ್ಗೋಪಾಯವಾದ ವೀಕ್ಷಣೆಯನ್ನು ಅಳವಡಿಸಲಾಗಿತ್ತು. ತುಂಬಾ ಚೆನ್ನಾಗಿತ್ತೆಂದು ಮಕ್ಕಳು ಅಭಿಪ್ರಾಯ ಪಟ್ಟರು. ರಸಪ್ರಶ್ನೆ ಹಿರಿಯರ ಪ್ರಶಂಸೆಗೂ ಪಾತ್ರವಾಯಿತು.



**ಜಾನಪದ ನೃತ್ಯ:** ವಿವಿಧ ರಾಜ್ಯಗಳ ಜಾನಪದ ನೃತ್ಯಗಳು ಮನಮೋಹಕವಾಗಿತ್ತು, ಅವುಗಳ ರಾಜ್ಯಗಳ ಸಂಸ್ಕೃತಿಯನ್ನು ಬಿಂಬಿಸಿತು. ಈ ನೃತ್ಯಗಳು ಮನಮೋಹಕವಾಗಿತ್ತು. ಭಾರತದ ಪ್ರತಿರಾಜ್ಯ ಸಂಸ್ಕೃತಿ ಒಂದೇ ವೇದಿಕೆ ಮೇಲೆ ಅದ್ಭುತವಾಗಿ ಮೂಡಿ ಬಂತು.

ಅಷ್ಟಕ ಸಭೆ–ಪ್ಯಾಟ್ರೋಲ್ ಇನ್ ಕೌನ್ಸಿಲ್: ಪ್ರತಿ ರಾಜ್ಯದಿಂದ ಒಂದು ಸ್ಕೌಟ್ ಮತ್ತು ಗೈಡ್‌ಗಳ 8ರ ಚಿಕ್ಕಗುಂಪು ಪ್ಯಾಟ್ರೋಲ್ ಸರತಿ ಪ್ರಕಾರ ಭಾಗವಹಿಸುತ್ತಿದ್ದರು. ಅವರಿಗೆ ಸಭೆಯಲ್ಲಿ ಚರ್ಚಿಸಿದ ಬೇಕಾದ ವಿಷಯ ನೀಡಲಾಗುತ್ತಿತ್ತು. ಪ್ರತಿ ಗುಂಪು ವಿಷಯನ್ನು ಚರ್ಚಿಸಿ ನಿರ್ಧಾರವನ್ನು ಠರಾವಿನ ರೂಪದಲ್ಲಿ ಬರೆದು ಕೊಡಬೇಕಿತ್ತು. ಈ ಚಟುವಟಿಕೆ ಸ್ಕೌಟ್–ಗೈಡ್ ತರಬೇತಿಯ ಭಾಗವಾಗಿದೆ. ಇದರಿಂದ ಮಕ್ಕಳಲ್ಲಿ ಪ್ರಜಾಪ್ರಭುತ್ವ ಕೌಶಲಗಳಾದ ತಮ್ಮ ಸುತ್ತಲಿನ/ದಳದ ಆಗುಹೋಗುಗಳ ಆಸಕ್ತಿ, ಚಿಂತನೆ, ಅಭಿಪ್ರಾಯ ವ್ಯಕ್ತಪಡಿಸುವುದು, ಚರ್ಚೆ, ನಿರ್ಣಯ ಹಾಗೂ ಮೌಲ್ಯಗಳಾದ ಪರಸ್ಪರ ಅಭಿಪ್ರಾಯಗಳ ಗೌರವ, ಸಹಿಷ್ಣುತೆ, ಒಟ್ಟಾಗಿ ನಿರ್ಣಯ ಕೈಗೊಳ್ಳುವುದು, ನಿರ್ಣಯವನ್ನು ಗೌರವಿಸುವುದು ಅನುಶಾಸನ ಪಾಲಿಸುವುದು ಮುಂತಾದವುಗಳ ಅಭಿವೃದ್ಧಿಗೊಳ್ಳುತ್ತವೆ.

**ವಿಸ್ತೃತ ಯುವವೇದಿಕೆ:** ಪ್ರತಿ ರಾಜ್ಯವು ಸರತಿ ಪ್ರಕಾರ 4 ಸ್ಕೌಟ್–ಗೈಡ್, ರೋವರ್ಸ್–ರೇಂಜರ್ಸ್‌ಗಳು ಭಾಗವಹಿಸುತ್ತಿದ್ದರು. ಅವರಿಗೆ ವಿಷಯಗಳನ್ನು ಬಹುಪಾಲು ಸಾಮಾಜಿಕ ಸಮಸ್ಯೆಗಳನ್ನು ನೀಡಲಾಗಿತ್ತು ಇವುಗಳಲ್ಲಿ ಕುರಿತು ಚರ್ಚಿಸಿ ಅವರು ಪರಿಹಾರವನ್ನು ನೀಡುತ್ತಾ ಈ ಕಾರ್ಯದಲ್ಲಿ ತಮ್ಮ ಪಾತ್ರವನ್ನು ಗುರುತಿಸಿಕೊಳ್ಳಬೇಕಿತ್ತು. ಈ ಚಟುವಟಿಕೆ ಸಾಮಾಜಿಕ ಸಮಸ್ಯೆಗಳ ಅರಿವು ಮೂಡಿಸುವುದು ಮಾತ್ರವಲ್ಲ, ಕಾಳಜಿ ಹಾಗೂ ತಾವೇನು ಮಾಡಬಹುದು ಎಂಬ ಚಿಂತನೆಯಲ್ಲಿ ತೊಡಗಿಸಿತು. ಇದು ಪ್ರಜಾಪ್ರಭುತ್ವದಲ್ಲಿ ಪ್ರಜೆಗಳ ಅತಿ ಮುಖ್ಯ ಕರ್ತವ್ಯವೂ ಹೌದು. ಈ ಕುರಿತು ಚಟುವಟಿಕೆ ಪ್ರಭಾಯುತವಾಗಿ ಮೂಡಿ ಬಂದಿತು.

**ಸ್ಕೌಟ್–ಗೈಡ್ ಕೌಶಲಗಳ ಸ್ಪರ್ಧೆ:** ಗುಡಾರದಲ್ಲಿ ಪೀಠೋಪಕರಣ ಮತ್ತು ವಸ್ತು ಜೋಡಣೆ, ರಾಜ್ಯದ ಮಹಾದ್ವಾರ, ಅಗ್ರಗಾಮಿತ್ವ ಯೋಜನೆಗಳ ಸ್ಪರ್ಧೆ ಇರುತ್ತಿತ್ತು. ಸಂಕೇತ ಭಾಷೆ, ಪ್ರಥಮ ಚಿಕಿತ್ಸೆ ಅಳತೆ ಅಂದಾಜು ಕೌಶಲಗಳ ಸ್ಪರ್ಧೆ ನಡೆಸಲಾಯಿತು.

ಈ ವೈವಿಧ್ಯಮಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ಮಕ್ಕಳಿಗೆ ದಿನ ಕಳದದ್ದೇ ತಿಳಿಯಲಿಲ್ಲ. ಈ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಕ್ಕೆ ಮಕ್ಕಳಿಗೆ ಪದಕಗಳನ್ನು ಕೊಡಲಾಯಿತು. ರಾಜ್ಯಕ್ಕೆ ಗ್ರೇಡ್ ಕೊಡಲಾಯಿತು. ರಾಜಾಸ್ಥಾನ ಮೊದಲ ಸ್ಥಾನಗಳಿಸಿತು ಉತ್ತರ ಪ್ರದೇಶ ಎರಡನೇ ಸ್ಥಾನಗಳಿಸಿತು.

ಇವುಗಳಲ್ಲದೆ ಮನರಂಜನಾ ಚಟುವಟಿಕೆಗಳು, ವಿಶೇಷ ಚಟುವಟಿಕೆಗಳು ಹಾಗೂ ವಯಸ್ಕರ ಚಟುವಟಿಕೆಗಳ ವೈವಿಧ್ಯತೆಗಳನ್ನು ಮುಂದಿನ ಸಂಚಿಕೆಯಲ್ಲಿ ನಿರೀಕ್ಷಿಸಿ.

ಮುಂದುವರಿಯುವುದು...

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬಳ್ಳಾರಿ ಹಾಗೂ ವೀ.ವಿ.ಸಂಘದ ವುಂಕಿಮರಿಸಿದ್ದಮ್ಮ ಪ್ರಾಥಮಿಕ ಮತ್ತು ಪ್ರೌಢಶಾಲೆ, ಬಸವೇಶ್ವರ ನಗರ ಬಳ್ಳಾರಿ ವತಿಯಿಂದ ಬೇಡನ್ ಪೋವೆಲ್ ರವರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು.

ಬೆಳಿಗ್ಗೆ 9.00 ಗಂಟೆಗೆ ಸರ್ವಧರ್ಮ ಸಮನ್ವಯ ಪ್ರಾರ್ಥನೆಯಲ್ಲಿ ಉಪನಿರ್ದೇಶಕರು ಹಾಗು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎ. ಶ್ರೀಧರನ್, ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗು ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎಂ. ವೃಷಭೇಂದ್ರಯ್ಯ, ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಬಿ.ಕುಮಾರಗೌಡ ಹಾಗು ಜಿಲ್ಲಾ ಹಾಗು ತಾಲೂಕು ಸಂಸ್ಥೆಯ ಪದಾಧಿಕಾರಿಗಳು, ಶಾಲೆಯ ಸಿಬ್ಬಂದಿ ವರ್ಗ ಹಾಗೂ ಬಳ್ಳಾರಿಯ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ನಂತರ ಧ್ವಜಾರೋಹಣ ಕಾರ್ಯಕ್ರಮವನ್ನು ನಡೆಸಲಾಯಿತು. ಈ ಕಾರ್ಯಕ್ರಮದ ಪ್ರಯುಕ್ತ ಮಕ್ಕಳಿಂದ "ರುಬೆಲ್ಲಾ ಮತ್ತು ಧಡಾರ" ಲಸಿಕೆ ಹಾಕಿಸಿಕೊಳ್ಳುವ ಬಗ್ಗೆ ಪಥ ಸಂಚಲನದ ಮೂಲಕ ಪ್ರಚಾರವನ್ನು ಮಾಡಲಾಯಿತು. ಜಿಲ್ಲಾ ಸಂಸ್ಥೆಯ ಆಯುಕ್ತರಾದ ಡಾ॥ ಕುಪ್ಪಗಲ್ ವೀರೇಶ್‌ರವರು ಬಿ.ಪಿ.ಯವರ ಶಿಸ್ತಿನ ಜೀವನದ ಬಗ್ಗೆ ವಿವರಿಸಿದರು. ಡಾ॥ ಯಂ.ಟಿ. ಮಲ್ಲೇಶ, ಜಿಲ್ಲಾ ಉಪಾಧ್ಯಕ್ಷರು ಪ್ರಾಸ್ತಾವಿಕ ನುಡಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಬೆಳೆದು ಬಂದ ಬಗ್ಗೆ ವಿವರವಾಗಿ ತಿಳಿಸಿದರು. ಈ ಸಂದರ್ಭದಲ್ಲಿ ಶಾಲೆಯ ಆಡಳಿತ ಮಂಡಳಿಯ ಅಧ್ಯಕ್ಷರಾದ ಶ್ರೀ ಬಾಣಾಪುರ ನಾಗಭೂಷಣ ಗೌಡ್ರು, ಸದಸ್ಯರುಗಳಾದ ಶ್ರೀ ಸಿರಿವಾರದ ವೀರಭದ್ರಪ್ಪ, ಶ್ರೀ ಕೆರೆನಳ್ಳಿ ಚಂದ್ರಶೇಖರ, ಜಿಲ್ಲಾ ಖಜಾಂಚಿಗಳಾದ ಶ್ರೀ ಪ್ರಭಾಕರ, ಕಾರ್ಯದರ್ಶಿ ಶ್ರೀ ವಿಜಯಸಿಂಹ, ರವರು ಭಾಗವಹಿಸಿದ್ದರು.

ವಿಶೇಷ ಕಾರ್ಯಕ್ರಮವಾಗಿ ಶ್ರೀ ಸಂದೀಪ ಜಾದುಗಾರ ಇವರು ಜಾದೂ ಪ್ರದರ್ಶನ ನೀಡಿ ಮನರಂಜಿಸಿದರು. ಶ್ರೀಮತಿ ಶೈಲಜ ಗೈಡ್ ಕ್ಯಾಪ್ಟನ್ ಸ್ವಾಗತಿಸಿದರು. ಶ್ರೀ ಎಂ. ಬಾಷ ಜಿಲ್ಲಾ ಸಂಘಟಕರು ವಂದಿಸಿದರು. ಶ್ರೀಮತಿ ಸರೋಜ ಬ್ಯಾತನಾಳ್ ಕಾರ್ಯಕ್ರಮ ನಿರೂಪಿಸಿದರು.

* ಫೆಬ್ರವರಿ 22 ರಂದು ವಿಜಯನಗರ ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ಘಟಕವಾದ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರೀ ಸ್ಕೌಟ್ಸ್ ಘಟಕ ಮತ್ತು ಕಲ್ಪನಾ ಚಾವ್ಲಾ ಗೈಡ್ಸ್ ಕಂಪನಿಯಲ್ಲಿ ಬೇಡನ್ ಪಾವೆಲ್ ಜನ್ಮ ದಿನವನ್ನು ಆಚರಿಸಲಾಯಿತು.



ಧ್ವಜಾರೋಹಣ ನಂತರ ನಡೆದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಕಾರ್ಯದರ್ಶಿಗಳಾದ ಶ್ರೀ ಸುಭಾಷ ಚಂದ್ರಬೋಸ್ ರವರು ವಹಿಸಿದ್ದರು. ಅತಿಥಿಗಳಾಗಿ ಶಾಲೆಯ ಮುಖ್ಯಗುರುಗಳಾದ ಶ್ರೀ ರಾಘವೇಂದ್ರ ದೇಶಪಾಂಡೆ ಅವರು ಭಾಗವಹಿಸಿದ್ದರು. ಸಹ ಶಿಕ್ಷಕರಾದ ಶ್ರೀಮತಿ ಶಂಕರಮ್ಮ, ಕು॥ ಐಶ್ವರ್ಯ ಹಾಗೂ ಕು॥ ಪೂರ್ಣಿಮ, ಬೇಡನ್ ಪಾವೆಲ್ ರವರ ಬಗ್ಗೆ ಪರಿಚಯಿಸಿದರು.

ಶಾಲೆಯ ಮುಖ್ಯ ಗುರುಗಳಾದ ಶ್ರೀ ರಾಘವೇಂದ್ರ ದೇಶಪಾಂಡೆ ರವರು ತಮ್ಮ ಮಾತಿನಲ್ಲಿ ಎಲ್ಲಾ ವಿದ್ಯಾರ್ಥಿಗಳಲ್ಲಿ ದೇಶಾಭಿಮಾನ, ದೇಶ ಸೇವೆ ಸಹಕಾರ, ತ್ಯಾಗ ಮನೋಭಾವನೆ ಮೂಡಿಸುವ ಪ್ರೇರೇಪಿತ ನುಡಿಗಳನ್ನು ನುಡಿದರು. ಅಷ್ಟೆ ಅಲ್ಲದೆ ವೈಯಕ್ತಿಕವಾಗಿ ಇದರಿಂದಾಗುವ ಬದಲಾವಣೆಯನ್ನು ತಿಳಿಸಿದರು.

* ಪೆಬ್ರವರಿ 22 ರಂದು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ 6ನೇ ವಿಭಾಗ ಸಿರುಗುಪ್ಪ ತಾಲ್ಲೂಕು ಜಿಲ್ಲೆ ಬಳ್ಳಾರಿಯಲ್ಲಿ ಸ್ಕೌಟ್ಸ್-ಗೈಡ್ಸ್‌ನ ಸಂಸ್ಥಾಪಕರಾದ ಬಿ.ಪಿ.ಯವರ ಜನ್ಮ ದಿನಾಚರಣೆಯನ್ನು ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿರುಗುಪ್ಪ ಇವರ ಅಧ್ಯಕ್ಷತೆಯಲ್ಲಿ ಹಾಗೂ ಶ್ರೀ ಚೊಕ್ಕ ಹನುಮಂತಗೌಡ ಅಧ್ಯಕ್ಷರು ಪ್ರಾ.ಶಾ. ಶಿಕ್ಷಕರ ಸಂಘ ಸಿರಗುಪ್ಪ ಹಾಗೂ ಶ್ರೀ ಕೆ. ಬಸವಲಿಂಗಪ್ಪ ಕಾರ್ಯದರ್ಶಿ, ವಿಶ್ವಜ್ಯೋತಿ ಇಂಟರ್ ನ್ಯಾಷನಲ್ ಪಬ್ಲಿಕ್ ಸ್ಕೂಲ್ ಮತ್ತು ಶ್ರೀ ವಿಜಯರಂಗಾರೆಡ್ಡಿ ಟಿ.ಪಿ.ಈ.ಓ. ಮತ್ತು ಶ್ರೀ ಅಶೋಕ್ ಜೈನ್, ತಾಲೂಕ ಘಟಕದ ಕಾರ್ಯದರ್ಶಿಗಳಾದ ಎನ್.ಎಂ. ನಟರಾಜ ಸ್ಕೌಟ್ಸ್-ಗೈಡ್ಸ್ ಹಾಗೂ ಖಜಾಂಚಿಯಾದ ಶ್ರೀ ಯೋಗೇಶ, ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರು ಹಾಗೂ ಮಕ್ಕಳ ಸಮ್ಮುಖದಲ್ಲಿ ಆಚರಿಸಲಾಯಿತು. ಕಾರ್ಯದರ್ಶಿಗಳಾದ ಶ್ರೀ ಎನ್. ಎಂ. ನಟರಾಜ್ ಪ್ರಾಸ್ತಾವಿಕ ಭಾಷಣವನ್ನು ಮಾಡಿದರು.

ನಂತರ ಶ್ರೀ ಕೆ. ಬಸವಲಿಂಗಪ್ಪ ಇವರು ಸ್ಕೌಟ್ಸ್‌ನಲ್ಲಿ ಎಲ್ಲಾ ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಶಿಸ್ತು, ಸಹಾಯ, ನೈತಿಕಮೌಲ್ಯ ಒಳ್ಳೆಯ ಗುರಿಗಳನ್ನು ಹೊಂದಿ ದೇಶದ ಪ್ರಗತಿಗೆ ಶ್ರಮಿಸಬೇಕೆಂದು ಹೇಳಿದರು.

ದಾನಿಗಳಾದ ಶ್ರೀ ಅಶೋಕ್ ಜೈನ್ ಮತ್ತು ರಾಜ್ಯ ಪುರಸ್ಕಾರ ಪಡೆದ ಶ್ರೀ ಎನ್.ಎಂ. ವಿನಯ್ ಕುಮಾರ್ ಇವರಿಗೆ ಸನ್ಮಾನ ಮಾಡಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ.ವಿ.ಶ್ರೀನಿವಾಸಮೂರ್ತಿಗಳುಇವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಇಂದು ಸಮಾಜದಲ್ಲಿ ನೈತಿಕ ಮೌಲ್ಯಗಳು ಕುಸಿಯುತ್ತವೆ ಅವುಗಳನ್ನು ಬಾಲ್ಯದಲ್ಲಿ ಉತ್ತಮ ರೀತಿಯಲ್ಲಿ ಬೆಳೆಸಿಕೊಂಡು ಆದರ್ಶ ಸಮಾಜದ ನಿರ್ಮಾಣಕ್ಕೆ ತಾವೆಲ್ಲರೂ ಮುಂದಾಗಬೇಕು ಎಂದು ತಿಳಿಸಿದರು. ವಂದನಾರ್ಪಣೆಯನ್ನು ಕು॥ ಅಮರೇಶ, ಸ್ಕೌಟ್ ನೆರವೇರಿಸಿದರು.

## ಬೆಳಗಾವಿ

ಫೆಬ್ರವರಿ 22 ರಂದು ಚಿಕ್ಕೋಡಿಯ ಕೆ.ಎಲ್.ಪಿ.ಎಸ್. ನಂ. 2 ವೆಂಕಟೇಶ ಮಂದಿರ ಶಾಲೆ ಇಲ್ಲಿ ಲಾರ್ಡ್ ಬೇಡನ್ ಪೋವೆಲ್ ರವರ ಜನ್ಮ ದಿನಾಚರಣೆ ಹಾಗೂ ವಿಶ್ವ ಚಿಂತನಾ ದಿನವನ್ನು ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಎಸ್.ಡಿ.ಎಂ.ಸಿ. ಅಧ್ಯಕ್ಷರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮಾನ್ಯ ಉಪನಿರ್ದೇಶಕರು (ಆ) ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕೋಡಿ ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜಿ.ಬಿ. ಮನ್ನಿಕೇರಿ ಇವರು ಆಗಮಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಿ.ಎ. ವೇತನ ಮರಡಿ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಂ.ಕೆ. ಪಾರ್ಥನಹಳ್ಳಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಎನ್. ಜಿ. ಪಾಟೀಲ, ಉಪ ನಿರ್ದೇಶಕರ ಕಛೇರಿಯ ಶ್ರೀ ಯರಗುದ್ರಿ, ಬೇರೆ ಬೇರೆ ಶಾಲೆಯ ಸ್ಕೌಟರ್, ಗೈಡರ್‌ಗಳು 250ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 22 ರಂದು ರಾಯಬಾಗ ತಾಲ್ಲೂಕಿನ 36 ಶಾಲೆಗಳಲ್ಲಿ, ಹುಕ್ಕೇರಿ ತಾಲ್ಲೂಕಿನಲ್ಲಿ 150 ಶಾಲೆಗಳಲ್ಲಿ ಚಿಕ್ಕೋಡಿ ತಾಲ್ಲೂಕಿನಲ್ಲಿ 165 ಶಾಲೆಗಳಲ್ಲಿ, ಗೋಕಾಕ ತಾಲೂಕಿನ 100 ಶಾಲೆಗಳಲ್ಲಿ, ನಿಪ್ಪಾಣಿ ವಲಯದ 100 ಶಾಲೆಗಳಲ್ಲಿ, ಮೂಡಲಗಿ ವಲಯದ 50 ಶಾಲೆಗಳಲ್ಲಿ, ಅಥಣಿಯ ಕೆ.ಎಲ್.ಇ. ಶಾಲೆಯಲ್ಲಿ ಸ್ಥಳೀಯ ಸಂಸ್ಥೆ ವತಿಯಿಂದ ತಾಲೂಕಿನ ಸ್ಕೌಟ್-ಗೈಡ್‌ಗಳಿಗೆ ಸಾಹಸಮಯ ಚಟುವಟಿಕೆಗಳನ್ನು ಏರ್ಪಡಿಸಿದ್ದರು. ಅಲ್ಲದೆ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಿ ವಿಜೇತರಾದ ಸ್ಕೌಟ್-ಗೈಡ್‌ಗಳಿಗೆ ಬಹುಮಾನ ವಿತರಿಸಿದರು. ಸದರಿ ಕಾರ್ಯಕ್ರಮದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಎಂ. ಬಡಿಗೇರ ಕಾರ್ಯದರ್ಶಿ ಶ್ರೀ ಎಸ್.ಎ. ವಾಲಿ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಒಟ್ಟು 250ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ಬೆಳಗಾವಿ ಶೈಕ್ಷಣಿಕ ಜಿಲ್ಲೆಯ ರಾಮದುರ್ಗ ಸ್ಥಳೀಯ ಸಂಸ್ಥೆಯವರು ಬಿ.ಪಿ.ರವರ ಜನ್ಮದಿನಾದರಣೆ ಅಂಗವಾಗಿ ರ್‍ಯಾಲಿಯನ್ನು ಸಂಘಟಿಸಿದ್ದರು. ರ್‍ಯಾಲಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಆರ್.ಟಿ. ಬಳಿಗಾರ ಹಸಿರು ನಿಶಾನೆ ತೋರಿಸಿ

ಚಾಲನೆ ನೀಡಿದರು. ಶ್ರೀ ಆರ್.ಎಸ್. ವಾಸನದ ದೈಹಿಕ ಶಿಕ್ಷಣ ಪರಿವೀಕ್ಷಕರು ಉಪಸ್ಥಿತರಿದ್ದರು. ಇದರಂತೆ ಉಳಿದೆಲ್ಲ ಸ್ಥಳೀಯ ಸಂಸ್ಥೆಗಳಲ್ಲಿ ಹಾಗೂ ಜಿಲ್ಲೆಯಾದ್ಯಂತ ಲಾರ್ಡ್ ಬೇಡನ್ ಪೊವೆಲ್ ರವರ ಜನ್ಮದಿನಾಚರಣೆ ಮತ್ತು ವಿಶ್ವ ಚಿಂತನಾ ದಿನಾಚರಣೆಯನ್ನು ಆಚರಿಸಿದ್ದಾರೆ.

* ಪೆಬ್ರವರಿ 25 ರಿಂದ 26 ರ ವರೆಗೆ ಗೋಕಾಕದ ಕೆ.ಎಲ್.ಇ. ಶಾಲೆಯಲ್ಲಿ ಕಬ್ ಮಕ್ಕಳಿಗೆ ದ್ವಿತೀಯ ಚರಣ್ ಹಾಗೂ ಬುಲ್ ಬುಲ್‌ಗಳಿಗೆ ರಜತ ಪಂಕ್ ಪರೀಕ್ಷಾ ಶಿಬಿರ ಪೂರ್ವ ಸಿದ್ಧತಾ ತರಬೇತಿ ಶಿಬಿರವನ್ನು ಆಯೋಜಿಸಿದ್ದರು. ಸದರಿ ಶಿಬಿರದ ನಾಯಕತ್ವವನ್ನು, ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ ವಹಿಸಿದ್ದರು. ಶಿಬಿರದ ಮೊದಲನೇ ದಿನ ಸ್ಕೌಟ್ಸ್-ಗೈಡ್ಸ್‌ಗಳನ್ನು ಹೊರ ಸಂಚಾರಕ್ಕೆ ಕರೆದುಕೊಂಡು ಹೋಗಿದ್ದರು. ಕೊನೆಯ ದಿನ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು.

* ಮಾರ್ಚ್ 3 ರಂದು ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಕಂಚೆಪ್ಪನವರ ತೋಟದ ಶಾಲೆಗೆ 2016-17 ನೇ ಸಾಲಿನ 'ಪರಿಸರ ಮಿತ್ರ' ಎಂದು ಚಿಕ್ಕೋಡಿಯ ಜಿಲ್ಲಾ ಪರಿಸರ ಅಧಿಕಾರಿಗಳು ಪ್ರಶಸ್ತಿ ನೀಡಿದ ಸಂದರ್ಭದಲ್ಲಿ ಆಯೋಜಿಸಿದ ಸಮಾರಂಭದಲ್ಲಿ ಶ್ರೀ ಜಿ.ಬಿ. ಮನ್ನಿಕೇರಿ ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಉಪನಿರ್ದೇಶಕರು (ಆ) ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ ಜಿಲ್ಲಾ ಪರಿಸರ ಅಧಿಕಾರಿ ಶ್ರೀ ಎಂ.ಎ. ಮನಿಯಾರ, ಪರಿಸರ ತಜ್ಞ, ಶ್ರೀ ರವೀಂದ್ರ ಪಟ್ಟಣಶೆಟ್ಟಿ, ಕೆ.ಎಲ್.ಇ. ಕಾಲೇಜು ಪ್ರಾಚಾರ್ಯರಾದ ಶ್ರೀ ಬಿ.ಎ. ಪೂಜಾರ, ಮುಖ್ಯೋಪಾಧ್ಯಾಯರಾದ ಶ್ರೀ ಎಂ.ಕೆ. ಪತ್ತಾರ, ಶ್ರೀ ಎಸ್.ಎ. ನಾವಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ವೈ.ಕೆ. ಭಜಂತ್ರಿ ಇವರು ಉಪಸ್ಥಿತರಿದ್ದರು. ಶಾಲೆಗೆ ಪ್ರಶಸ್ತಿಯೊಂದಿಗೆ ರೂ.30,000 ಗಳ ಚೆಕ್ ಮತ್ತು ಮೂಲಕ ಪರಿಸರ ಜಾಗೃತಿ ಪುಸ್ತಕಗಳನ್ನು ವಿತರಿಸಿದರು.

ಮಾರ್ಚ್ 4 ರಂದು ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರಾಜೇಂದ್ರ ಡಿ. ತೇರದಾಳ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಡಿ.ಎಸ್. ದಿಗ್ರಜ್, ಶಿಕ್ಷಣ ಸಂಯೋಜಕರಾದ ಶ್ರೀ ಆರ್.ಎಂ. ಪಾಟೀಲ ಸಿ.ಆರ್.ಪಿ. ಶ್ರೀ ಶಿವಾನಂದ, ಹಣಸಿ ಮತ್ತು ಶ್ರೀ ತೋಟದ, ಶಾಲೆಯ ಎಸ್.ಡಿ.ಎಂ.ಸಿ., ಅಧ್ಯಕ್ಷರು, ಸದಸ್ಯರುಗಳು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಲ್ಲಿ ಪ್ರಶಸ್ತಿಯನ್ನು ನೀಡಿ ಅಭಿನಂದಿಸಿದರು.



ಇತ್ತೀಚೆಗೆ ಎಸ್.ವಿ.ಇ.ಎಸ್ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಹಾರೊಗೇರಿ ಇಲ್ಲಿ ರೋಟರಿ ಕ್ಲಬ್‌ನ ಸಂಯುಕ್ತ ಆಶ್ರಯದಲ್ಲಿ ರಕ್ತದಾನ ಶಿಬಿರವು ಜರುಗಿತು. ಇದರಲ್ಲಿ 15 ರೋವರ್‌ಗಳು ಭಾಗವಹಿಸಿದ್ದರು.

## ಬೆಂಗಳೂರು ಉತ್ತರ

ಪೆಬ್ರವರಿ 22 ಚಿಂತನಾ ದಿನಾಚರಣೆಯನ್ನು ಬಾಣಸವಾಡಿ ಸ್ಥಳೀಯ ಸಂಸ್ಥೆಯ ವತಿಯಿಂದ ಮಾರುತಿ ವಿದ್ಯಾಲಯ, ಬಾಬಾಸಾಬ್ ಪಾಳ್ಯ, ಐ.ಸಿ.ಎಸ್.ಇ., ವಿಭಾಗದಲ್ಲಿ ಆಚರಿಸಲಾಯಿತು. ವಿವಿಧ ಶಾಲೆಗಳ ಘಟಕದಿಂದ 280 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್‌ಗಳು ಭಾಗವಹಿಸಿದ್ದರು.

ಸಾಮೂಹಿಕ ಸರ್ವಧರ್ಮ ಪ್ರಾರ್ಥನೆಯಲ್ಲಿ ಮಾರುತಿ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಮತಿ ಕೋಕಿಲ, ಉಪಪ್ರಾಂಶುಪಾಲರಾದ ಶ್ರೀಮತಿ ಪರಿಮಳ ಎ.ಡಿ.ಸಿ., ಶ್ರೀ ಸಂಪತ್‌ಕುಮಾರ್, ಲಯನ್ ಶ್ರೀ ಪಿಳ್ಳಪ್ಪ, ಶ್ರೀ ರಾಜು ಮತ್ತು ಸ್ಕೌಟ್ ಮಾಸ್ಟರ್ಸ್, ಹಿರಿಯ ಗೈಡ್ ಶಿಕ್ಷಕಿ ಶ್ರೀಮತಿ ಅಗತಾ ಮೇರಿ ಭಾಗವಹಿಸಿದ್ದರು.




ಸ್ಥಳೀಯ ಹೆಣ್ಣೂರು ಪೋಲಿಸ್ ಠಾಣೆಯ ಆವರಣದಲ್ಲಿ ಸಂಸ್ಥಾಪಕರ ಸವಿನೆನಪಿಗಾಗಿ ಠಾಣೆಯ ಮುಖ್ಯ ಅಧಿಕಾರಿಗಳಾದ ಶ್ರೀ ಶ್ರೀನಿವಾಸ್ ಮತ್ತು ಬಾಲ ನಾಯ್ಕ ಗಿರೀಶ್ ಮುಂತಾದವರು ಸಸಿಗಳನ್ನು ನೆಟ್ಟು ಸ್ಕೌಟ್-ಗೈಡ್‌ಗಳಿಗೆ ಪ್ರೋತ್ಸಾಹಕ ನುಡಿಗಳನ್ನು ನುಡಿದರು. ಕಾರ್ಯದರ್ಶಿಗಳಾದ ಶ್ರೀ ಯೋಗಶ್ರೀ ವರ್ಧಮಾನ ಕಳಸೂರು. ಕಾರ್ಯಕ್ರಮವನ್ನು ಆಯೋಜಿಸಿ, ಸರ್ವರಿಗೂ ವಂದಿಸಿದರು.

The Shivajinagar Local Association organized Thinking Day and Founders Day on 4th March 2017 at Stracey Memorial P.u. College, St. Marks Road.

On this occasion the Local Association Released a Book "Memories of Yesteryears" Volume -2. Sri T.S. Lucas, Vice-President, Smt. Ratnajali Nicodmus, President, Dr. Krubanandan, Principal of P.U. College and ADC(S) of LA, Sri B.K. Sheshadri, District Secretary, Dr. Sr. Jessy, S.A., ADC(G) of LA, Sri WinsentJocab, Vice-President & ASC(S), Smt. Revathy. B, Co-ordinator & ASC (G) and Smt. Kumari N. Honnamma, Do Were Present.

All Faith's Prayer and Activities were conducted. The Programme was co-ordinated by Smt. C.V. Krupa Vijai, ALT(G) & L.A. Secretary

## ಬೆಂಗಳೂರು ದಕ್ಷಿಣ

ಪೆಬ್ರವರಿ 22 ರಂದು ಆನೇಕಲ್ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಸ್ಕೌಟ್ ಸಂಸ್ಥಾಪಕ ಬೇಡನ್ ಪೋವೆಲ್ ರವರ ಜನ್ಮ ದಿನಾಚರಣೆ ಮತ್ತು ವಿಶ್ವ ಸ್ಕೌಟ್ ದಿನಾಚರಣೆ ಪ್ರಯುಕ್ತ ಇಂಡ್ಲವಾಡಿ ಕ್ರಾಸ್‌ನ ಸಾಯಿ ಸಿಟಿ ಇಂಟರ್‌ನ್ಯಾಷನಲ್ ಶಾಲೆ, ಭಗತ್ ಸಿಂಗ್ ಓಪನ್ ಸ್ಕೌಟ್ ಗ್ರೂಪ್‌ಗಳ ಸ್ಕೌಟ್, ಗೈಡ್, ರೋವರ್‌ಗಳು ಸರ್ಕಾರಿ ಸಾರ್ವಜನಿಕ ಆಸ್ಪತ್ರೆ, ಕಂಬದ ಗಣಪತಿ ದೇವಾಲಯ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣಗಳನ್ನು ಸ್ವಚ್ಛಗೊಳಿಸುವ ಶ್ರಮದಾನ ಶಿಬಿರವನ್ನು ಹಮ್ಮಿಕೊಂಡಿದ್ದರು.



ಕಾರ್ಯಕ್ರಮವನ್ನು ಉದ್ಘಾಟಿಸಿದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ ವಿಶ್ವದಾದ್ಯಂತ ಪ್ರೀತಿ, ಪ್ರೇಮ, ಶಾಂತಿ, ಸಹಬಾಳ್ವೆ, ಸಮಾನತೆ ಮತ್ತು ಸಹೋದರತ್ವ ನೆಲೆಸಲೆಂದು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯನ್ನು ಸ್ಥಾಪಿಸಿದ ಬೇಡನ್ ಪೊವೆಲ್ ರವರಜೀವನ ಎಲ್ಲರಿಗೂ ಆದರ್ಶವಾಗಬೇಕಿದೆ ಎಂದರು.

ಸ್ಥಳೀಯ ಸಂಸ್ಥೆಯ ಖಜಾಂಚಿ ಶ್ರೀ ಸಿ. ಲಕ್ಷ್ಮೀಕಾಂತರಾಜು, ಸಾಯಿಸಿಟಿ ಇಂಟರ್ ನ್ಯಾಷನಲ್ ಶಾಲೆಯ ಲೇಡಿ ಸ್ಕೌಟ್ ಮಾಸ್ಟರ್ ಶ್ರೀಮತಿ ಎಸ್. ಹೇಮಲತಾ, ಗೈಡ್ ಕ್ಯಾಪ್ಟನ್ ಕುಮಾರಿ ಎಸ್. ಅಂಬಿಕ, ಸೆಂಟ್ ಜೋಸೆಫ್ ಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಜಿ.ಪಿ. ಫಿಲೋಮಿನಾ, ಭಗತ್ ಸಿಂಗ್ ಓಪನ್ ರೋವರ್ ತಂಡದ ಶ್ರೀ ಎಂ. ರಾಜಶೇಖರ್, ಶ್ರೀ ಎಂ. ಜೀವನ್, ಶ್ರೀ ಎಲ್. ರಾಜೇಶ್ ಮತ್ತು ಶ್ರೀ ಡಿ. ರಘು ಮೊದಲಾದವರು ಉಪಸ್ಥಿತಿರಿದ್ದರು.

* The Ulsoor Local Association Conducted Annual Rally on Thursday the 16th Feb 2017 at The StateHeadquarters Campus, 39, Shanthi Gruha, Palace Road, Bangalore.The rally started at 10.30 am with the Flag Ceremony followed by Inauguration by Sri D. Venkatesh, Assistant State Commissioner (Scouts) and Sri P. Palani, District Commissioner (Scouts) with the lighting of lamp along with the District Secretary Sri M.S. Sateesh. Different Competitions were held.

Cubs & Bulbuls – (a) Drawing, (b) Best out of waste © Greetings. Scouts & Guides – (a) Painting (Scouts) & (b) Collage with the Theme-Save Water Save Environment (c) Rangoli (d) Mehendi (Guides) (e) Quiz and (f) Cooking without fire.

Smt. S.K. Prabha, Joint State Secretary (G) and Sri M.K. Khan, District Chief Commissioner were the chief guests in the function. Sri N. Anand (District treasurer) Sri T.K. Narayanaswamy D.T.C. (Scouts) Smt. Manjula (State Organising Commissioner) (G), Smt K.V. Shamala (StateTraining Commissioner) and the LA secretaries graced the Occassion. Sri M.K. Khan (DCC) was felicitated.

## ಚಿತ್ರದುರ್ಗ

ಫೆಬ್ರವರಿ 11 ರಿಂದ 18 ರ ವರೆಗೆ ಶ್ರೀ ಮಠ ಸಾಣೇಹಳ್ಳಿ, ಹೊಸದುರ್ಗ ತಾಲ್ಲೂಕು ಇಲ್ಲಿ ಮೂಲ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್ ವಿಭಾಗಗಳಿಂದ ತರಬೇತಿ ನಡೆಸಲಾಯಿತು. ಈ ತರಬೇತಿಯಲ್ಲಿ ಕಬ್ಸ್ ವಿಭಾಗದ ಒಂದು ತಂಡಕ್ಕೆ ಶ್ರೀ ಎಸ್.ಎಸ್. ಹುಸೇನಿರವರು, ಎರಡನೇ ತಂಡಕ್ಕೆ ಶ್ರೀ ಕೃಷ್ಣಮೂರ್ತಿ ನಾಯಕರಾಗಿದ್ದರು. ಸ್ಕೌಟ್ ವಿಭಾಗದಲ್ಲಿ ಶ್ರೀ ಡಿ. ಬಸವರಾಜ್ ಮತ್ತು ಶ್ರೀ ಸಿ.ಎನ್. ಮಹೇಶ್ ರವರು ನಾಯಕರಾಗಿದ್ದರು. ಗೈಡ್ ವಿಭಾಗದಲ್ಲಿ ಶ್ರೀಮತಿ ಸಿ.ಪಿ.ಸುಶೀಲಾ ನಾಯಕಿಯಾಗಿದ್ದರು. ಈ ಶಿಬಿರಕ್ಕೆ ಶ್ರೀಶ್ರೀ ಡಾ॥ ಪಂಡಿತಾರಾಧ್ಯ ಶ್ರೀಗಳು ತುಂಬಾ ಸಹಕಾರ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಂ. ರೇವಣಸಿದ್ದಪ್ಪ ಡಿ.ಡಿ.ಪಿ.ಐ., ರವರು ಬಿ.ಇ.ಓ. ಶ್ರೀ ರಾಮಯ್ಯ, ಬಿ.ಆರ್.ಸಿ. ಶ್ರೀ ಮೌನೇಶ, ಟಿ.ಪಿ.ಇ.ಓ. ಶ್ರೀ ಸತ್ಯನಾರಾಯಣರವರಗಳ ಸಹಕಾರದೊಂದಿಗೆ ಶಿಬಿರವು ಯಶಸ್ವಿಯಾಯಿತು. ಶಿಬಿರದ ಎಲ್ಲಾ ವ್ಯವಸ್ಥೆಯನ್ನು ಜಿಲ್ಲಾ ಸಂಸ್ಥೆಯಿಂದ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಪಿ.ಎಲ್. ಸುರೇಶ್ ರಾಜು, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ.ಎ. ರಾಮಲಿಂಗಾರೆಡ್ಡಿರವರು ಮಾಡಿದರು. ತರಬೇತಿಯ ಸಂಘಟನೆಯನ್ನು ಸಂಘಟಕರಾದ ಶ್ರೀ ಟಿ. ಕರಿಸಿದ್ದಪ್ಪ, ಶ್ರೀ ಬಿ. ಗುರುಮೂರ್ತಿ, ಶ್ರೀಮತಿ ಕೆ.ಎಲ್. ನಾಗಲತಾ ವಹಿಸಿದ್ದರು.

ಶ್ರೀಗಳು ಶೇಕ್ಸ್‌ಪಿಯರ್ ರವರ ನಾಟಕವನ್ನು ವಿದ್ಯಾರ್ಥಿಗಳಿಂದ ಪ್ರದರ್ಶನ ಏರ್ಪಡಿಸಿದ್ದರು, ಸಮಾರೋಪ ಸಮಾರಂಭದಲ್ಲಿ ಶ್ರೀಗಳ ಸಾನಿಧ್ಯದಲ್ಲಿ ರಾಜ್ಯ ಪ್ರಧಾನ ಆಯುಕ್ತರಾದ ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಹಾಗೂ ಹೊಸದುರ್ಗ ತಾಲ್ಲೂಕಿನ ಶಾಸಕರಾದ ಶ್ರೀ ಬಿ.ಜಿ. ಗೋವಿಂದಪ್ಪ ರವರು, ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಪದಾಧಿಕಾರಿಗಳು ಭಾಗವಹಿಸಿದ್ದರು.

* ಫೆಬ್ರವರಿ 21 ರಿಂದ 22 ರ ವರೆಗೆ ಚಿತ್ರದುರ್ಗ ಜಿಲ್ಲಾ ಮಟ್ಟದ ರ‍್ಯಾಲಿ ಮತ್ತು ಲಾರ್ಡ್ ಬೇಡನ್ ಪೋವೆಲ್ ರವರ ಜನ್ಮ ದಿನಾಚರಣೆ ಅಂಗವಾಗಿ ಜಿಲ್ಲಾ ಗುರುಭವನ, ಹಳೆ ಮಾಧ್ಯಮಿಕ ಶಾಲಾ ಆವರಣದಲ್ಲಿ ಧ್ವಜ ವಂದನಾ ಕಾರ್ಯಕ್ರಮ ಮತ್ತು ಶಿಬಿರಾಗ್ನಿ ಕಾರ್ಯಕ್ರಮಗಳನ್ನು ನಡೆಸಲಾಯಿತು. 223 ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಸ್ಕೌಟರ್ಸ್-ಗೈಡರ್ಸ್‌ಗಳು ಹಾಗೂ ಶಿಕ್ಷಕರು ಪಾಲ್ಗೊಂಡಿದ್ದರು. ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಪಿ.ಎಲ್. ಸುರೇಶ್ ರಾಜು, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು ಹಾಗೂ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.



ನಗರದ ಬೀದಿಗಳಲ್ಲಿ ಪರಿಸರ ಮತ್ತು ಸ್ವಚ್ಚತೆ ಬಗ್ಗೆ ಅರಿವು ಮೂಡಿಸುವ ಫಲಕಗಳನ್ನು ಹಿಡಿದು ಮೆರವಣಿಗೆ ಹೋಗಿ ಬರಲಾಯಿತು. ಫೆಬ್ರವರಿ 22 ರಂದು ಬಿ.ಪಿ. ರವರ ಜನ್ಮ ದಿನದ ಅಂಗವಾಗಿ ಸರ್ವಧರ್ಮ ಪ್ರಾರ್ಥನೆಯನ್ನು ಆಚರಿಸಲಾಯಿತು. ನಂತರ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ವರಿಷ್ಠಾಧಿಕಾರಿ ಶ್ರೀ ಅರುಣ್ ರಂಗರಾಜನ್ ರವರು ಮಾತನಾಡಿ ನಾನು ಕೂಡ ವಿದ್ಯಾರ್ಥಿಯಾಗಿದ್ದಾಗ ಸ್ಕೌಟ್ ಆಗಿದ್ದು, ನಾನು ಸಹ ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಪುರಸ್ಕಾರಗಳನ್ನು ಪಡೆದಿರುವೆನು. ನೀವು ಸಹ ಈ ಪುರಸ್ಕಾರಗಳನ್ನು ಪಡೆದು ಉನ್ನತ ಹುದ್ದೆಯನ್ನು ಅಲಂಕರಿಸಿ ಉತ್ತಮ ನಾಗರೀಕರಾಗಿ. ನೀವು ಕೂಡ ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ಸಮಾಜಕ್ಕೆ ಉತ್ತಮ ಸಲಹೆ, ಸೂಚನೆಗಳನ್ನು ನೀಡುವಂತಹ ಅಧಿಕಾರಿಗಳಾಗಿ ಎಂದು ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಾರೈಸಿದರು. ಜಿಲ್ಲಾ ಸಂಸ್ಥೆಯಿಂದ ಇವರನ್ನು ಗೌರವಿಸಲಾಯಿತು. ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಎಂ. ರೇವಣಸಿದ್ದಪ್ಪರವರು ರಾಷ್ಟ್ರಪತಿಯವರಿಂದ "ಸಿಲ್ವರ್ ಸ್ಟಾರ್" ಪದಕವನ್ನು ಪಡೆದುಕೊಂಡ ಪ್ರಯುಕ್ತ ಜಿಲ್ಲಾ ಸಂಸ್ಥೆ ವತಿಯಿಂದ ಸನ್ಮಾನಿಸಲಾಯಿತು. ಈ ಸಮಾರೋಪ ಸಮಾರಂಭದಲ್ಲಿ ಸ್ಕೌಟ್ಸ್

ಆಯುಕ್ತರು ಶ್ರೀ ಪಿ.ಎಲ್. ಸುರೇಶರಾಜು, ಬೇಡನ್ ಪೊವೆಲ್ ರವರ ಬಗ್ಗೆ ಮಾತನಾಡಿದರು. ಶಿಬಿರದ ಉದ್ದೇಶಗಳನ್ನು ಶ್ರೀ ಟಿ. ಕರಿಸಿದ್ದಪ್ಪ ರವರು ತಿಳಿಸಿದರು. ಸಮಾರಂಭದಲ್ಲಿ ಶ್ರೀ ಎಂ.ಕೆ. ತಾಜ್ ಪೀರ್, ಉಪಾಧ್ಯಕ್ಷರು, ಶ್ರೀ ಎಂ.ಆರ್. ನಾರಾಯಣಪ್ಪ, ಉಪಾಧ್ಯಕ್ಷರು, ಇತರ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರು, ಜಿಲ್ಲಾ ಸಂಘಟಕರು ಹಾಜರಿದ್ದರು. ಶ್ರೀ ಸಿ.ಎನ್. ಮಹೇಶ್ ಎಲ್.ಟಿ.(ಸ್ಕೌಟ್) ರವರು, ಶ್ರೀಮತಿ ಸುಶೀಲಮ್ಮ ಸಿ.ಪಿ. ಡಿ.ಟಿ.ಸಿ.(ಗೈಡ್ಸ್) ರವರು ರ‍್ಯಾಲಿಯ ನಾಯಕರಾಗಿ ಕರ್ತವ್ಯ ನಿರ್ವಹಿಸಿದರು. ಶ್ರೀ ಯರ‍್ರಿಸ್ವಾಮಿ, ಹೆಚ್.ಕ್ಯೂ.ಸಿ. ಸ್ವಾಗತಿಸಿದರು. ಶ್ರೀಮತಿ ನಾಗಲತ ನಿರೂಪಿಸಿದರು.

## ಚಿಕ್ಕಬಳ್ಳಾಪುರ

ಜನವರಿ 27 ರಿಂದ 28 ರ ವರೆಗೆ ವಿದುರಾಶ್ವತ್ಥ, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಕಬ್ಸ್ ಶತಮಾನೋತ್ಸವವನ್ನು ಆಯೋಜಿಸಲಾಗಿತ್ತು. ಈ ಉತ್ಸವದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬೈಯಪ್ಪರೆಡ್ಡಿರವರು ಹಾಗೂ ಜಿಲ್ಲೆಯ ವಿವಿಧ ಶಾಲೆಯ ಶಿಕ್ಷಕರು ಸೇರಿದಂತೆ 200 ಕಬ್ಸ್ ಮತ್ತು ಬುಲ್‌ಬುಲ್ಸ್ ಪಾಲ್ಗೊಂಡಿದ್ದರು.

* ಫೆಬ್ರವರಿ 2 ರಂದು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಜಿಲ್ಲಾ ಮಟ್ಟದ ಪ್ರಗತಿ ಪರಿಶೀಲನಾ ಸಭೆಯನ್ನು ಶ್ರೀಮತಿ ದೀಪ್ತಿ ಆದಿತ್ಯ ಕಾನಡೆ, ಭಾ.ಆ.ಸೇ. ಜಿಲ್ಲಾಧಿಕಾರಿಗಳು ಇವರ ಅಧ್ಯಕ್ಷತೆಯಲ್ಲಿ ಆಯೋಜಿಸಲಾಗಿತ್ತು. ರಾಜ್ಯ ಮುಖ್ಯ ಆಯುಕ್ತರಾಧ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಸಭೆಯಲ್ಲಿ ಪಾಲ್ಗೊಂಡು ರಾಜ್ಯ ಸಂಸ್ಥೆಯಿಂದ ಚಿಕ್ಕಬಳ್ಳಾಪುರ ಜಿಲ್ಲಾ ಸಂಸ್ಥೆಗೆ ಸಂಪೂರ್ಣ ಸಹಕಾರವನ್ನು ನೀಡುವುದಾಗಿ ಭರವಸೆ ನೀಡಿದರು. ಶ್ರೀಮತಿ ಬಿ.ವಿ. ರಾಮಲತಾ ಸಹಾಯಕ ರಾಜ್ಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಅಶ್ವತ್ಥರೆಡ್ಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸಭೆಯಲ್ಲಿ ಉಪಸ್ಥಿತರಿದ್ದು, ಜಿಲ್ಲೆಯ ಪ್ರಸಕ್ತ ಸಾಲಿನ ಅಭಿವೃದ್ಧಿ ಅಂಶಗಳ ಕುರಿತು ಚರ್ಚಿಸಲಾಯಿತು.

* ಫೆಬ್ರವರಿ 22 ರಂದು ಶಿಡ್ಲಘಟ್ಟದಲ್ಲಿ ನಡೆದ ಸಂಸ್ಥಾಪಕರ ದಿನಾಚರಣೆಯಲ್ಲಿ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರಘುನಾಥರೆಡ್ಡಿ, ಬಿ.ಆರ್.ಪಿ. ಟಿಪಿಓ, ತಾಲ್ಲೂಕಿನ ತರಬೇತಿ ಪಡೆದ ಶಿಕ್ಷಕರು ಹಾಗೂ ಮಕ್ಕಳು ಸೇರಿ 150 ಮಂದಿ ಉಪಸ್ಥಿತರಿದ್ದರು.

* ಫೆಬ್ರವರಿ 8 ರಂದು ಸ್ಕೌಟ್ಸ್-ಗೈಡ್ಸ್ ತರಬೇತಿ ಪಡೆದ ಶಿಕ್ಷಕರಿಗೆ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಸ್ಥಳೀಯ ಸಂಸ್ಥೆ ಚಿಕ್ಕಬಳ್ಳಾಪುರ ವತಿಯಿಂದ ಸಮಾವೇಶ ನಡೆಸಲಾಯಿತು. ಶ್ರೀ ಎ.ಎಂ. ಶಂಕರ್ ಸ.ರಾ.ಸಂ.ಆ., ಶ್ರೀ ಮನೋಹರ್ ಜಿಲ್ಲಾ ಕಾರ್ಯದರ್ಶಿ, ತಾಲ್ಲೂಕು ಸಂಸ್ಥೆ ಕಾರ್ಯದರ್ಶಿ ಶ್ರೀ ಶಿವಮೂರ್ತಿ ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಿದರು. ಅಧ್ಯಕ್ಷತೆ ವಹಿಸಿದ್ದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶ್ರೀಕಂಠರವರು ಮಾತನಾಡಿ ಜಿಲ್ಲೆಯಲ್ಲಿ ಮಾದರಿ ಸಂಸ್ಥೆಯಾಗುವಂತೆ ಆಗಲು ಇಲಾಖೆಯ ಕಡೆಯಿಂದ ಎಲ್ಲಾ ಸಹಕಾರ ನೀಡುವ ಭರವಸೆ ನೀಡಿದರು. ಶ್ರೀ ಶಿವಪುತ್ರಪ್ಪ ಟಿ.ಪಿ.ಓ. ಹಾಜರಿದ್ದರು.

## ಚಿಕ್ಕಮಗಳೂರು

ಸಮಾಜಕ್ಕೆ ಉಪಯುಕ್ತವಾಗುವ ಸಂರಕ್ಷಣಾ ಕ್ರಮಗಳನ್ನು ಮೈಗೂಡಿಸಿಕೊಳ್ಳುವುದರಿಂದ ಉತ್ತಮ ಸೇವೆ ಸಲ್ಲಿಸಬಹುದೆಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಹೇಳಿದರು.

ಮಾರ್ಚ್ 7 ರಂದು ಐ.ಡಿ.ಎಸ್.ಜಿ. ಕಾಲೇಜಿನ ಮಲ್ಲೇಗೌಡ ಸಭಾಂಗಣದಲ್ಲಿ ಕಾಲೇಜು ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ಕಾಲೇಜು ರೋವರ್-ರೇಂಜರ್ಸ್ ಘಟಕಗಳ ಸಂಯುಕ್ತಾಶ್ರಯದಲ್ಲಿ ಕುವೆಂಪು ವಿಶ್ವವಿದ್ಯಾನಿಲಯ ಮಟ್ಟದ 5 ದಿನಗಳ ರೋವರ್ಸ್-ರೇಂಜರ್ಸ್‌ಗಳ ಪರಿಸರ ಅಧ್ಯಯನ ಮತ್ತು ಚಾರಣ ಶಿಬಿರ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡಿದರು. ಪ್ರಾಂಶುಪಾಲೆ ಡಾ. ಜರಿನಾ ಕೌಸರ್ ಅಧ್ಯಕ್ಷತೆ ವಹಿಸಿ ಮಾತನಾಡಿ, ಮನುಕುಲದ ಸೇವೆಯೆ ಸ್ಕೌಟ್ಸ್ ಆಶಯ, ಪರಿಸರ ರಕ್ಷಣೆ ನಮ್ಮ ಆದ್ಯ ಕರ್ತವ್ಯ, ನಮ್ಮ ಸುತ್ತಲಿನ ಪರಿಸರ ನಿರ್ಮಲ ಹಾಗೂ ಸ್ವಚ್ಛವಾಗಿಟ್ಟುಕೊಳ್ಳುವಲ್ಲಿ ವಿದ್ಯಾರ್ಥಿ, ಯುವಜನರು ಶ್ರಮವಹಿಸಬೇಕು ಎಂದರು. ಕುವೆಂಪು ವಿ.ವಿ. ಸಿಂಡಿಕೇಟ್ ಸದಸ್ಯ ಡಾ. ಎಚ್. ವಿಷ್ಣುವರ್ಧನ

ಶಿಬಿರ ಉದ್ಘಾಟಿಸಿ ಮಾತನಾಡಿ, ಸ್ಕೌಟ್ಸ್ ಸಮವಸ್ತ್ರ ನಮ್ಮಿಂದ ಹೆಚ್ಚಿನದನ್ನು ನಿರೀಕ್ಷಿಸುತ್ತದೆ. ಸಮಾಜಕ್ಕೆ ಉಪಕಾರಿಗಳಾಗಿ ಬಾಳುವ ತರಬೇತಿ ಇಲ್ಲಿ ಪಡೆಯಬಹುದು ಎಂದು ತಿಳಿಸಿದರು. ಶಿಬಿರದ ಸಂಪನ್ಮೂಲ ವ್ಯಕ್ತಿ ಸಾಗರದ ವಕೀಲ ಶ್ರೀ ಗಣೇಶ್ ಮತ್ತು ಕಾಲೇಜು ಅಭಿವೃದ್ಧಿ ಸಮಿತಿ ಸದಸ್ಯ ಶ್ರೀ ಎಚ್.ಎನ್. ಗಂಗಾಧರ ಶುಭ ಹಾರೈಸಿದರು. ಸ್ಕೌಟ್ ಜಿಲ್ಲಾ ಸಂಘಟಕ ಶ್ರೀ ಕಿರಣಕುಮಾರ್ ಮತ್ತು ಗೈಡ್ಸ್ ಸಂಘಟಕಿ ಶ್ರೀಮತಿ ಸಂಧ್ಯಾರಾಣಿ ವೇದಿಕೆಯಲ್ಲಿದ್ದರು.

ಶಿಬಿರಾಧಿಕಾರಿ ಕಾಜೇಜಿನ ರೋವರ್ಸ್ ಲೀಡರ್ ಶ್ರೀ ಬಿ. ಯೋಗೀಶ್ ಸ್ವಾಗತಿಸಿ, ಪ್ರಾಸ್ತಾಪಿಸಿದರು. ಉಪನ್ಯಾಸಕ ಶ್ರೀ ಪುಟ್ಟಸ್ವಾಮಿ ವಂದಿಸಿದರು. ಕೊಪ್ಪ ಕಾಲೇಜಿನ ವಿದ್ಯಾರ್ಥಿನಿಯರಾದ ಕೆ.ಕೆ. ಕವನಾ ಮತ್ತು ಟಿ.ಎಸ್. ರಶ್ಮಿ ನಿರೂಪಿಸಿದರು. ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯ 11 ಪ್ರಥಮ ದರ್ಜೆ ಕಾಲೇಜುಗಳ 100ಕ್ಕೂ ಹೆಚ್ಚು ಶಿಬಿರಾರ್ಥಿಗಳು ಭಾಗವಹಿಸಿದ್ದರು.

## ಚಾಮರಾಜನಗರ



ಮಾರ್ಚ್ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಚಾಮರಾಜನಗರದಲ್ಲಿ "ವಿಶ್ವ ಜಲ ದಿನಾಚರಣೆ" ಆಚರಿಸಲಾಯಿತು. ಶ್ರೀಮತಿ ಪಿ. ಕಮಲಮ್ಮ ಜಿಲ್ಲಾ ಸಂಘಟಕರು(ಗೈ) ಸ್ವಾಗತ ಕೋರಿದರು. ಶ್ರೀ ವಿ.ಎಂ. ರಾಮಚಂದ್ರ ಜಿಲ್ಲಾ ಕಾರ್ಯದರ್ಶಿ ಪ್ರಾಸ್ತಾವಿಕ ನುಡಿ ನುಡಿದರು. ಹಾಜರಿದ್ದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ, ವಿದ್ಯಾರ್ಥಿಗಳು ಈ ಕೆಳಗಿನಂತೆ ಪ್ರತಿಜ್ಞಾ ಸ್ವೀಕರಿಸಿದರು. "ನಾನು ನನ್ನ ಕೈಲಾದ ಮಟ್ಟಿಗೆ ಇಂದಿನಿಂದ ಜಲ ಸಂಪತ್ತನ್ನು ರಕ್ಷಿಸಿ, ಜಲ ಕ್ಷಾಮವನ್ನು ಹೋಗಲಾಡಿಸಿ ಚಾಮರಾಜನಗರವನ್ನು ರಕ್ಷಿಸುತ್ತೇನೆಂದು ನನ್ನ ಗೌರವ ಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ.

ವೈಯಕ್ತಿಕವಾಗಿ ಜಲ ಸಂರಕ್ಷಣೆ, ಮನೆಯ ಸುತ್ತಮುತ್ತ ಜಲಸಂರಕ್ಷಣೆ, ಗ್ರಾಮದಲ್ಲಿ ಜಲಸಂರಕ್ಷಣೆ ಜಲಕ್ಷಾಮಕ್ಕೆ ಕಾರಣ, ಜಲಕ್ಷಾಮದ ನಿವಾರಣೋಪಾಯ ಮುಂತಾದ ವಿಷಯಗಳ ಬಗ್ಗೆ ಗುಂಪುಚರ್ಚೆ ಮಾಡಿ ವರದಿ ನೀಡಿದರು. ಶ್ರೀ ಎನ್. ಅಶೋಕ ಕುಮಾರ್, ಜಿಲ್ಲಾ ಸಂಘಟಕ (ಸ್ಕೌ) ರವರು ವಂದನಾರ್ಪಣೆ ಗೈದರು.

## ದಾವಣಗೆರೆ



ಜನವರಿ 23 ರಿಂದ 24 ವರೆಗೆ ಹೊನ್ನಾಳಿ ಸ್ಥಳೀಯ ಸಂಸ್ಥೆ ವತಿಯಿಂದ ತಾಲ್ಲೂಕು ಮಟ್ಟದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್ ರ್‍ಯಾಲಿಯನ್ನು ಆಯೋಜಿಸಲಾಗಿತ್ತು. ರ್‍ಯಾಲಿಯ ಉದ್ಘಾಟನಾ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು, ಹೊನ್ನಾಳಿ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ಶಾಂತನಗೌಡ, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಹೊನ್ನಾಳಿ ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಭಾಗವಹಿಸಿದ್ದರು. ಸುಮಾರು 750 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್. ಸ್ಕೌಟರ್ಸ್-ಗೈಡರ್ಸ್‌ಗಳೊಂದಿಗೆ ಭಾಗವಹಿಸಿದ್ದರು. ರ್‍ಯಾಲಿಯ ನೇತೃತ್ವವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎಸ್. ರಾಜಶೇಖರಪ್ಪ ವಹಿಸಿದ್ದರು. ಹೊನ್ನಾಳಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಹೆಚ್. ಆಂಜನೇಯ ಮತ್ತು ಹೊನ್ನಾಳಿ ಸ್ಥಳೀಯ ಸಂಸ್ಥೆಯ ಎಲ್ಲಾ ಸ್ಕೌಟರ್ಸ್-ಗೈಡರ್ಸ್‌ಗಳು ಕಾರ್ಯಕ್ರಮವನ್ನು ಸಂಘಟಿಸಿದರು.

* ಜನವರಿ 25 ರಂದು ಜಿಲ್ಲಾಧಿಕಾರಿಗಳ ಆದೇಶದ ಮೇರೆಗೆ ಎ.ವಿ. ಕಮಲಮ್ಮ ಕಾಲೇಜಿನಲ್ಲಿ ನಡೆದ 7ನೇ ರಾಷ್ಟ್ರೀಯ ಮತದಾರರ ದಿನಾಚರಣೆ ಕಾರ್ಯಕ್ರಮದಲ್ಲಿ ಜೈನ್ ವಿದ್ಯಾಶಾಲೆ, ಸಿ.ವಿ.ವಿ. ಹಿರಿಯ ಪ್ರಾಥಮಿಕ ಶಾಲೆ, ನೇತಾಜಿ ಓಪನ್ ಸ್ಕೌಟ್ ಗ್ರೂಪ್, ಚೇತನಾ ಗೈಡ್ ಕಂಪನಿಯ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ವಿವಿಧ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಜನವರಿ 26 ರಂದು ಧ.ರಾ.ಮ ಸ್ಕೌಟ್ ಭವನದಲ್ಲಿ 68ನೇ ಗಣರಾಜ್ಯೋತ್ಸವವನ್ನು ಆಚರಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ಧ್ವಜಾರೋಹಣ ನೆರವೇರಿಸಿದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಪಥಸಂಚಲನದಲ್ಲಿ ಜಿಲ್ಲಾ ಸಂಸ್ಥೆ ಬ್ಯಾಂಡ್ ಬಳಗಕ್ಕೆ ಬಹುಮಾನ ಲಭಿಸಿತು.



* ಜನವರಿ 27 ರಿಂದ ಫೆಬ್ರವರಿ 3 ರ ವರೆಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹರಿಹರ ಕಾಲೇಜಿನ 10 ರೋವರ್ಸ್‌ಗಳು ರಾಜ್ಯ ಪುರಸ್ಕಾರ ಪ್ರಶಸ್ತಿಗೆ ಅವಶ್ಯವಿರುವ ಸೈಕ್ಲಿಂಗ್ ಪದಕಕ್ಕಾಗಿ ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿಗೆ ಒಟ್ಟು 350 ಕಿ.ಮೀ. ನಷ್ಟು ಸೈಕ್ಲಿಂಗ್ ಪ್ರವಾಸ ಹೋಗಿದ್ದರು. ಕಾಲೇಜಿನ ಪ್ರಾಚಾರ್ಯರಾದ ಡಾ. ಅಂಜಿನಪ್ಪ ಎಸ್.ಆರ್ ಹಾಗೂ ರೋವರ್ ಸ್ಕೌಟ್ ಲೀಡರ್ ಶ್ರೀ ಸುರೇಶ್ ಜಿ.ಎಸ್. ಇವರು ರೋವರ್ಸ್‌ಗಳಿಗೆ ಮಾರ್ಗದರ್ಶನ ಮಾಡಿದರು.

* ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟಿಂಗ್ - ಗೈಡಿಂಗ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪಾವೆಲ್ ಹುಟ್ಟುಹಬ್ಬ ಹಾಗೂ ಲೇಡಿ ಬೇಡನ್ ಪಾವಲ್‌ರ ಹುಟ್ಟುಹಬ್ಬದ ಅಂಗವಾಗಿ ಸಂಸ್ಥಾಪಕರ ದಿನಾಚರಣೆ ಮತ್ತು ಚಿಂತನಾ ದಿನವನ್ನು ಹಾಗೂ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಧ.ರಾ.ಮ. ಸ್ಕೌಟ್ ಭವನ, ಪಿ.ಜೆ. ಬಡಾವಣೆ, ದಾವಣಗೆರೆ ಇಲ್ಲಿ ಆಚರಿಸಲಾಯಿತು. ಜಿಲ್ಲೆಯ ವಿವಿಧ ಶಾಲೆಯ 500 ಸ್ಕೌಟ್ಸ್-ಗೈಡ್ಸ್‌ಗಳು ನಗರದ ಪ್ರಮುಖ ಬೀದಿಗಳಲ್ಲಿ ಪಥಸಂಚಲನೆ ಹಾಗೂ ರೋವರ್ಸ್-ರೇಂಜರ್ಸ್‌ಗಳು ಸೈಕಲ್ ಜಾಥಾ ನಡೆಸಿದರು.

ಶ್ರೀಮತಿ ಹೆಚ್.ಎಂ. ಪ್ರೇಮ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ ಇವರು ಕಾರ್ಯಕ್ರಮ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಬೂಸ್ನೂರು ವಿಶ್ವನಾಥ್, ಜಿಲ್ಲಾ ಖಜಾಂಚಿಗಳು, ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಉಪಸ್ಥಿತರಿದ್ದರು.

* ಫೆಬ್ರವರಿ 10 ರಂದು ತುಂಗಭದ್ರ ಸಭಾಂಗಣ, ಹರಿಹರ ರಸ್ತೆ, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇಲ್ಲಿ 2016-17 ನೇ ಸಾಲಿನ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಮತ್ತು ಸೇವಾ ಪದಕ ಪ್ರಧಾನ ಸಮಾರಂಭವನ್ನು ಆಯೋಜಿಸಲಾಗಿತ್ತು. ಈ ಸಮಾರಂಭದಲ್ಲಿ ಜಿಲ್ಲಾಧಿಕಾರಿಗಳಾದ ಶ್ರೀ ಡಿ.ಎಸ್. ರಮೇಶ್ ಭಾ.ಆ.ಸೇ. ಇವರು ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರಧಾನ ಮಾಡಿದರು. ರಾಜ್ಯ ಮುಖ್ಯ ಆಯುಕ್ತರದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ದೀರ್ಘಕಾಲ ಸೇವೆ ಸಲ್ಲಿಸಿದ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಸೇವಾ ಪದಕ ವಿತರಿಸಿದರು. ಉಪನಿರ್ದೇಶಕರಾದ ಶ್ರೀಮತಿ ಹೆಚ್.ಎಂ. ಪ್ರೇಮರವರು ಜಿಲ್ಲಾ ವಾರ್ತಾ ಪತ್ರಿಕೆಯನ್ನು ಬಿಡುಗಡೆ ಮಾಡಿದರು. ಪಿ.ಎಸ್.ಎಸ್.ಇ.ಎಂ.ಆರ್. ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಸಮಾರಂಭದಲ್ಲಿ ದೇಶ ಭಕ್ತಿ ಗೀತೆಗಳನ್ನು ಹಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲೆಯ ಸುಮಾರು 450 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು, ಸ್ಕೌಟರ್ಸ್-ಗೈಡರ್ಸ್‌ಗಳು ಪೋಷಕರು ಭಾಗವಹಿಸಿದರು.



## ಧಾರವಾಡ



ಜನವರಿ 22 ರಂದು ವಿಶ್ವ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕ ಲಾರ್ಡ್ ಬೇಡನ್ ಪಾವೆಲ್ ಹಾಗೂ ಲೇಡಿ ಬೇಡನ್ ಪಾವೆಲ್ ರ ಜನ್ಮ ದಿನವನ್ನು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಸಂಘಟಿಸಲಾಯಿತು. ಶಹರದ ವಿವಿಧ ಶಾಲೆಗಳಿಂದ ಮೂರು ನೂರು ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿ ಅತ್ಯುತ್ತಮ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಾದರ ಪಡಿಸಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

## ಗದಗ



ಫೆಬ್ರವರಿ 10 ರಂದು ಗದಗ ಶಹರ ವಲಯದ ಸ್ಕೌಟ್ಸ್-ಗೈಡ್ಸ್ ಮೇಳವನ್ನು ಆಚರಿಸಲಾಯಿತು. ನಗರದ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶಾಲೆಯ ಫಾದರ್ ಶ್ರೀ ಪೆಂಡಾಜ ರವರು ಪಥಚಲನೆಗೆ ಚಾಲನೆ ನೀಡಿದರು. ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಶೌಚಾಲಯ, ಪರಿಸರ ಬಗ್ಗೆ ಅರಿವು ಮೂಡಿಸಲಾಯಿತು. ಮೇಳದಲ್ಲಿ ಶ್ರೀಮತಿ ಬಿ.ಡಿ. ಪವಾರ್, ಡಿ.ಟಿ.ಸಿ(ಜಿ) ಶ್ರೀ ಹೆಚ್.ಎಸ್. ಬ್ಯಾಳಿ, ಶ್ರೀ ಬೇವಿನ ಮರದ, ಶ್ರೀ ಹಂಜಗಿ, ಶ್ರೀಮತಿ ವಾರ್ಗಕೇಟ, ಶ್ರೀಮತಿ ಎಸ್.ಜಿ. ಗೌಡರ, ಶ್ರೀಮತಿ ಜಮಖಂಡಿ ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್ ರವರುಗಳು ಹಾಜರಿದ್ದರು.



* ಪೆಟ್ರೋಲ್ ನಾಯಕರ ಶಿಬಿರವನ್ನು ಗದಗ ಶಹರ ಸ್ಥಳೀಯ ಸಂಸ್ಥೆ ವತಿಯಿಂದ ಸೇಂಟ್‌ಜಾನ್ ಪ್ರಾಥಮಿಕ ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಧ್ಯಕ್ಷತೆಯನ್ನು ಶ್ರೀ ಬೆನಕಪ್ಪ ಐ.ಬಿ. ಕ್ಷೇತ್ರ ಶಿಕ್ಷಣಾಧಿಕಾರಿ ಗದಗ ಶಹರ ವಹಿಸಿದ್ದರು. ಅತಿಥಿಗಳಾಗಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಈರಣ್ಣ ಮುನವಳ್ಳಿ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಸುರೇಶ ಅಂಗಡಿ, ಶಾಲೆಯ ಫಾದರ್ ಶ್ರೀ ಫೆರ್‍ರ್ಡಾ, ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳ ಮುಖ್ಯ ಗುರುಗಳಾದ ಸಿಸ್ಟರ್ ದಿವ್ಯಾ, ಶ್ರೀಮತಿ ಮೇರಿ, ಗದಗ ಶಹರದ ಉಪಾಧ್ಯಕ್ಷರಾದ ಶ್ರೀ ಬಿ.ಡಿ. ಕಿಲಬನ್ನವರ, ಭಾಗವಹಿಸಿದ್ದರು. ಶಿಬಿರಗಳ ನಾಯಕರಾಗಿ ಶ್ರೀ ಹೆಚ್. ಎಸ್. ಬ್ಯಾಳಿ, ನಾಯಕಿಯಾಗಿ ಶ್ರೀಮತಿ ಬಿ.ಡಿ. ಪವಾರ್ ವಹಿಸಿದ್ದರು.



* ಫೆಬ್ರವರಿ 21 ರಿಂದ 23 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ನರಗುಂದ ವತಿಯಿಂದ ಗುಂಪು ನಾಯಕರ ತರಬೇತಿ ಹಾಗೂ ದ್ವಿತೀಯ ಸೋಪಾನ ಶಿಬಿರವನ್ನು ಪತ್ರಿವನ ಮಠದಲ್ಲಿ ನಡೆಸಲಾಯಿತು. ಶ್ರೀ ಎಸ್.ಎನ್. ಹುಗ್ಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಉದ್ಘಾಟಿಸಿದರು. ಶ್ರೀ ಶಶಿಧರ ಬಡಿಗೇರ, ಬಿ.ಆರ್.ಸಿ. ಕೋ-ಆರ್ಡಿನೇಟರ್ ಮುಖ್ಯ ಅತಿಥಿಯಾಗಿದ್ದರು. ನರಗುಂದ ತಾಲ್ಲೂಕಿನ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು ಹಾಗೂ

ಗೈಡ್ ವಿಭಾಗಕ್ಕೆ ಶ್ರೀಮತಿ ಶ್ರೀ ಎನ್.ಎಸ್. ಜಾಧವ್ ಎ.ಎಲ್.ಟಿ.(ಎಸ್.) ಹಾಗೂ ಗೈಡ್ ವಿಭಾಗಕ್ಕೆ ಶ್ರೀಮತಿ ರಾಕಾರ್ ವಾಸ್ ನಾಯಕತ್ವ ವಹಿಸಿದ್ದರು. ಶ್ರೀ ಸಿಯಪ್ಪ ಗೌಡರ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಉಪಸ್ಥಿತರಿದ್ದರು.

* ಫೆಬ್ರವರಿ 24 ರಂದು ನರಗುಂದ ನಗರದ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳಿಂದ ಪತ್ರಿವನಮಠ ನರಗುಂದದಲ್ಲಿಯ ಆವರಣವನ್ನು ಸ್ವಚ್ಛಗೊಳಿಸಲಾಯಿತು. ಇದರ ನೇತೃತ್ವವನ್ನು ಶ್ರೀ ಸಿರಿಯಪ್ಪ ಗೌಡರ ಶ್ರೀ ಅಂಕಲಗಿ ಹಿರಿಯ ಸ್ಕೌಟರ, ಶ್ರೀ ಜಾಧವ ಎ.ಎಲ್.ಟಿ.(ಎಸ್) ವಹಿಸಿದ್ದರು.

* ಫೆಬ್ರವರಿ 25 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಹರ್ಲಾಪುರ ತಾ॥ ಗದಗ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಶ್ರಮದಾನ ಶಿಬಿರವನ್ನು ನಡೆಸಲಾಯಿತು. ಇದರ ನೇತೃತ್ವವನ್ನು ಶಾಲೆಯ ಸ್ಕೌಟ್ ಮಾಸ್ಟರ್ ರವರಾದ ಶ್ರೀ ಗೋಂದಳಕರ ವಹಿಸಿದ್ದರು. ಶಾಲೆಯ ಆವರಣವನ್ನು ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛಗೊಳಿಸಿದರು. ಇದರಲ್ಲಿ ಶಾಲೆಯ ಮುಖ್ಯೋಪಾಧ್ಯಾರು ಸಿಬ್ಬಂದಿವರ್ಗ ಭಾಗವಹಿಸಿದ್ದರು.

## ಹಾಸನ

ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಮತ್ತು ಸ.ಹಿ.ಪ್ರಾ.ಶಾಲೆ, ಕೋಟೆ, ಹೊಳೆನರಸೀಪುರ, ಇವರ ಸಂಯುಕ್ತ ಆಶ್ರಯದಲ್ಲಿ ಸಂಸ್ಥಾಪಕರಾದ ಲಾರ್ಡ್ ಸ್ಟೀಫನ್ ಸ್ಮಿತ್ ಬೇಡನ್ ಪಾವೆಲ್ (ಬಿ.ಪಿ.) ಮತ್ತು ಅಲೇವ್ ಬೇಡನ್ ಪಾವೆಲ್ ರವರ ಹುಟ್ಟುಹಬ್ಬವನ್ನು ಆಚರಿಸಲಾಯಿತು.

ಸಂಸ್ಥಾಪಕರ ದಿನಾಚರಣೆ ಕುರಿತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಟಿ.ಆರ್. ನಾರಾಯಣ ಶೆಟ್ರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಪುರಸಭಾ ಮಾಜಿ ಅಧ್ಯಕ್ಷರಾದ ಶ್ರೀ ಹೆಚ್.ಎನ್. ಜನಾರ್ಧನ್ ರವರು ಈ ಸಂಸ್ಥೆಯಲ್ಲಿ ಶಿಸ್ತು ಮುಖ್ಯವಾಗಿದೆ. ಪ್ರೀತಿಯೇ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಬಂಡವಾಳ, ಪರೋಪಕಾರ, ದೇಶಸೇವೆಗಾಗಿ ಸ್ವಯಂ ಸೇವಕರಾಗಿ ದುಡಿಯಬೇಕೆಂದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಎಸ್.ಎನ್. ನಾಗರಾಜು ರವರು – 1907 ರಲ್ಲಿ ಇಂಗ್ಲೇಂಡ್‌ನಲ್ಲಿ ಲಾರ್ಡ್ ಬೇಡನ್ ಪಾವೆಲ್ ರಿಂದ ಸ್ಕೌಟಿಂಗ್ ಆರಂಭವಾಗಿ, ಪ್ರಪಂಚದ 216 ರಾಷ್ಟ್ರಗಳಲ್ಲಿ ತನ್ನ ಅಸ್ತಿತ್ವವನ್ನು ಹೊಂದಿದೆ. 2 ಕೋಟಿ 80 ಲಕ್ಷ ಸಮವಸ್ತ್ರದಾರಿಗಳಿದ್ದಾರೆಂದು ತಿಳಿಸಿದರು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ. ಯೋಗೇಶ್ ರವರು ಮಾತನಾಡುತ್ತಾ – ನಾಡಿನ ಮುಂದಿನ ಸತ್ಪ್ರಜೆಗಳನ್ನು ನಿರ್ಮಿಸುವಲ್ಲಿ ಭಾರತ್ ಸ್ಕೌಟ್ಸ್ -ಗೈಡ್ಸ್ ಸಂಸ್ಥೆಯು ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಅಸಾಧಾರಣ ಸೇವೆಯನ್ನು ಸಲ್ಲಿಸುತ್ತಿದೆ. ಈ ಸಂಸ್ಥೆಯಲ್ಲಿ ಕೆಲಸ ಮಾಡುವವರಿಗೆ ನಾನು ಸಂಪೂರ್ಣ ಸಹಕಾರ ನೀಡುವುದಾಗಿ ತಿಳಿಸಿದರು. ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀಮತಿ ಕೆ.ಸಿ. ಪುಷ್ಪಲತ ರವರು ಮಕ್ಕಳು ಈ ಸಂಸ್ಥೆಯ ಸದುಪಯೋಗ ಪಡೆದುಕೊಂಡು ಒಗ್ಗಟ್ಟಿನಿಂದ ಎಲ್ಲರೂ ಭೇದ-ಭಾವಗಳನ್ನು ಮರೆತು ಒಮ್ಮತದಿಂದ ಬಾಳಿರಿ ಎಂದರು.

## ಕಲಬುರಗಿ



ಫೆಬ್ರವರಿ 22 ರಂದು ಯುವಕರಲ್ಲಿ ಶಿಸ್ತು, ದೇಶಪ್ರೇಮ, ಮಾನವೀಯ ಮೌಲ್ಯಗಳನ್ನು ಬೆಳೆಸುವುದನ್ನೇ ತನ್ನ ಜೀವಾಳವಾಗಿಸಿಕೊಂಡ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ವಿವಿಧ ಸ್ಪರ್ಧೆಗಳನ್ನು ಆಯೋಜಿಸುವ ಮೂಲಕ ಸಂಸ್ಥೆಯ ಸಂಸ್ಥಾಪಕ ಬೇಡನ್ ಪಾವೆಲ್‌ನ ಜನ್ಮ ದಿನವನ್ನು ಅರ್ಥಪೂರ್ಣವಾಗಿ ಆಚರಿಸಿಕೊಂಡಿತು.

ನಗರದ ಶಹಾಬಾದ್ ರಸ್ತೆಯ ಕೇಂಬ್ರಿಡ್ಜ್ ಶಾಲೆಯ ವಿಶಾಲ ಸಭಾಂಗಣದಲ್ಲಿ ಕಲಬುರಗಿ ಜಿಲ್ಲೆಯ 8 ತಾಲೂಕುಗಳ ಪ್ರೌಢಶಾಲೆಗಳ ಸ್ಕೌಟ್ಸ್-ಗೈಡ್ಸ್ ನ ಸುಮಾರು 500ಕ್ಕೂ ಅಧಿಕ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ಈ ಸಮಾರಂಭದಲ್ಲಿ ಕೇಂಬ್ರಿಡ್ಜ್ ಶಾಲೆಯ ನಿರ್ದೇಶಕರಾದ ಶ್ರೀ ದಿನಾಜ್ ನೆವಿಲ್ ಇರಾಣಿ ಹಾಗೂ ಶ್ರೀ ನೌಶಾದ್ ನೆವಿಲ್ ಇರಾನಿ, ಪ್ರಾಚಾರ್ಯ ಶ್ರೀಮತಿ ನೀತಾ ಪುರೋಹಿತ, ಗೈಡ್ಸ್ ಶಿಕ್ಷಕಿ ಶ್ರೀಮತಿ ಸುಮಂಗಲಾ ಕೋರಿ, ಶ್ರೀಮತಿ ವಿಜಯಲಕ್ಷ್ಮಿ ಜಯಪ್ರಕಾಶ ಕಟ್ಟಮನಿ, ಶ್ರೀ ಗುರುನಾಥ ಕಾಳೆ ಭಾಗವಹಿಸಿದ್ದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವೀರಭದ್ರಯ್ಯಸ್ವಾಮಿ ಸ್ವಾಗತಿಸಿದರು. ಸಂಸ್ಥೆಯ ಜಿಲ್ಲಾ ಕಾರ್ಯದಶಿ, ಶ್ರೀ ಚೆನ್ನವೀರಯ್ಯ ಸ್ವಾಮಿ ವಂದಿಸಿದರು.

ಮಾನವೀಯ ಮೌಲ್ಯಗಳು ಯುವಶಕ್ತಿಯ ಜೀವಾಳವಾಗಬೇಕು ಎಂಬ ಸದುದ್ದೇಶದೊಂದಿಗೆ ಗುಲಬರ್ಗಾ ವಿಶ್ವವಿದ್ಯಾಲಯವು ಶೀಘ್ರವೇ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಶಾಖೆ ಆರಂಭಿಸಲಿದೆ. ಎಂದು ಕಲಬುರಗಿ ವಿವಿ ದೈಹಿಕ ಶಿಕ್ಷಣ ನಿರ್ದೇಶಕ ಡಾ. ಎಂ.ಎಸ್. ಪಾಸೋಡಿ ಹೇಳಿದರು. ಸಸಿಗೆ ನೀರೆರೆಯುವ ಮೂಲಕ ಸಮಾರಂಭಕ್ಕೆ ಚಾಲನೆ ನೀಡಿ ಮಾತನಾಡಿದರು. ಕಲಬುರಗಿ ಸಾ.ಶಿ. ಇಲಾಖೆ ಉಪನಿರ್ದೇಶಕ ಶ್ರೀ ಶಾಂತಗೌಡ ಪಾಟೀಲ್ ಮಾತನಾಡಿ, ದೇಶದಲ್ಲಿ ವಿಘಟನಾಕಾರಿ ವಿದ್ಯಮಾನಗಳು ಹೆಚ್ಚುತ್ತಿದ್ದು, ಯುವಶಕ್ತಿ ತಪ್ಪು ದಾರಿ ತುಳಿಯದಂತೆ ಎಚ್ಚರ ವಹಿಸುವಲ್ಲಿ ಸ್ಕೌಟ್ಸ್-ಗೈಡ್ಸ್‌ನಂತಹ ಸೇವಾ ಸಂಸ್ಥೆಗಳ ಜವಾಬ್ದಾರಿ ಹೆಚ್ಚಿದೆ ಎಂದು ಅಭಿಪ್ರಾಯಪಟ್ಟರೆ, ಗೈಡ್ಸ್ ಸಂಸ್ಥೆ ಜಿಲ್ಲಾ ಆಯುಕ್ತೆ ಶ್ರೀಮತಿ ಜಯಶ್ರೀ ಗೋಗಿ ಮಾತನಾಡಿ, ಮಕ್ಕಳ ಹಾಗೂ ಯುವಶಕ್ತಿಯ ಸದ್ಬಳಕೆ ಅಗತ್ಯವಿದೆ ಎಂದರು.

ಕ.ರಾ. ಸರಕಾರಿ ಪ್ರಾಥಮಿಕ ಶಾಲೆ ಶಿಕ್ಷಕರ ಸಂಘದ ಜಿಲ್ಲಾಧ್ಯಕ್ಷ ಶ್ರೀ ಮಲ್ಲಯ್ಯ ಗುತ್ತೇದಾರ ಮಾತನಾಡಿ, ಜಿಲ್ಲೆಯ ಎಲ್ಲಾ ಪ್ರೌಢಶಾಲೆಗಳ ದೈಹಿಕ ಶಿಕ್ಷಣದ ಶಿಕ್ಷಕರಿಗೂ ಸ್ಕೌಟ್ಸ್-ಗೈಡ್ಸ್ ಕುರಿತು ತರಬೇತಿ ಆಯೋಜಿಸುವತ್ತ ಸಾ.ಶಿ. ಇಲಾಖೆ ಗಮನ ಹರಿಸಬೇಕು ಎಂದರು. ಪತ್ರಕರ್ತಶ್ರೀ ವೆಂಕಟೇಶ ಮಾನು ಅತಿಥಿಗಳಾಗಿದ್ದರು. ಸ್ಕೌಟ್ಸ್ ಜಿಲ್ಲಾ ಆಯುಕ್ತರಾದ ಶ್ರೀ ಎಸ್. ಪಿ. ಸುಳ್ಳದ ಅಧ್ಯಕ್ಷತೆ ವಹಿಸಿದ್ದರು.

## ಕೋಲಾರ

· ಜನವರಿ 15 ರಂದು ಕೋಲಾರ ಸ್ಥಳೀಯ ಸಂಸ್ಥೆಯ ಆವರಣದಲ್ಲಿ 17ನೇ ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ಕೋಲಾರ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ರಂಗಯ್ಯರವರು ಪ್ರಶಸ್ತಿ ಪತ್ರಗಳನ್ನು ವಿತರಿಸಿ ಸ್ಕೌಟ್ಸ್ ಮತ್ತು ಗೈಡ್ಸ್ ಗಳು ಸಮಾಜದ ಪ್ರಗತಿಗೆ ಕೈಜೋಡಿಸಿ ಸಂಸ್ಥೆಯ ಆದರ್ಶಗಳನ್ನು ಸಾಕಾರಗೊಳಿಸಬೇಕಾಗಿದೆ ಎಂದರು. ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಮತ್ತಷ್ಟು ಬಲಗೊಳ್ಳಲು ಸಹಕಾರ ನೀಡಲಾಗುವುದು ಎಂದರು. ಈ ಸಮಾರಂಭದಲ್ಲಿ ಕೋಲಾರ ಜಿಲ್ಲಾ ಸಂಸ್ಥೆಯ ಪಧಾಧಿಕಾರಿಗಳಾದ ಶ್ರೀ ಕೆ.ವಿ. ಶಂಕರಪ್ಪ, ಶ್ರೀ ಬಿಸಪ್ಪಗೌಡ. ಶ್ರೀಮತಿ ಕೆ.ಆರ್. ಜಯಶ್ರೀ, ಶ್ರೀ ಪ್ರಹ್ಲಾದ ರಾವ್, ಮುಂತಾದವರು ಹಾಜರಿದ್ದರು.

* ಜನವರಿ 26 ರಿಂದ 27 ರವರೆಗೆ ರಾಷ್ಟ್ರಪತಿ ರೋವರ್ಸ್ ಮತ್ತು ರೇಂಜರ್ಸ್ ಪೂರ್ವ ಸಿದ್ದತಾ ಶಿಬಿರವನ್ನು ಕೋಲಾರ ತಾಲ್ಲೂಕಿನ ಹೊಳಲಿ ಗ್ರಾಮದ ಭೀಮಲಿಂಗೇಶ್ವರ ದೇವಾಲಯದ ಆವರಣದಲ್ಲಿ ನಡೆಸಲಾಯಿತು. ಈ ಶಿಬಿರವನ್ನು ಗ್ರಾಮದ ಮುಖಂಡರಾದ ಶ್ರೀ ಹೊಳಲಿ ಪ್ರಕಾಶ್ ರವರು ದೀಪ ಬೆಳಗುವ ಮೂಲಕ ಉದ್ಘಾಟಿಸಿದರು. ಶಾಲಾ ಮುಖ್ಯ ಶಿಕ್ಷಕರು ಹಾಗೂ ಸ್ಕೌಟ್ಸ್ ಶಿಕ್ಷಕರಾದ ಶ್ರೀ ಎಲ್. ಶ್ರೀನಿವಾಸ್ ರವರು ಹಾಜರಿದ್ದು ಶಿಬಿರದ ಯಶಸ್ವಿಗೆ ಕೈಜೋಡಿಸಿದರು.

* ಜನವರಿ 19 ರಂದು ಮಾಲೂರಿನ ಸ್ಥಳೀಯ ಸಂಸ್ಥೆ ಮತ್ತು ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜಿನ ಸಂಯುಕ್ತ ಆಶ್ರಯದಲ್ಲಿ ಪ್ರಾವಿಣ್ಯತಾ ಪದಕ ತರಬೇತಿ ಶಿಬಿರವನ್ನು ನಡೆಸಲಾಯಿತು. ಶಿಬಿರದ ಉದ್ಘಾಟನೆಯು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ರಾಮಕೃಷ್ಣ ರವರಿಂದ ನೆರವೇರಿತು. ಈ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಅಶ್ವಥ್ ರೆಡ್ಡಿ, ಶ್ರೀ ದೇವರಾಜ್. ಶ್ರೀ ಶ್ರೀನಿವಾಸ್. ಶ್ರೀ ವೆಂಕಟೇಶ್. ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಫೆಬ್ರವರಿ 6 ರಿಂದ 8 ರವರೆಗೆ ಚೇತಮಂಗಲದಲ್ಲಿನ ಶ್ರೀ ಭವಾನಿ ಡಿ.ಇಡಿ., ಕಾಲೇಜಿನಲ್ಲಿ ಜಿಲ್ಲಾ ಮಟ್ಟದ ನಿಪುಣ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು.ಈ ಶಿಬಿರವನ್ನು ಕಾಲೇಜಿನ ಸಂಸ್ಥಾಪಕರಾದ ಶ್ರೀ ಗೋಪಾಲ ರೆಡ್ಡಿ ರವರು ದೀಪ ಬೆಳಗುವ ಮೂಲಕ ಉದ್ಘಾಟಿಸಿದರು.ಶಿಬಿರ ನಾಯಕರಾಗಿ ಶ್ರೀ ಕೆ.ಆರ್. ಸುರೇಶ್. ನಾಯಕಿಯಾಗಿ ಶ್ರೀಮತಿ ಕೆ. ಆರ್. ಮಂಜುಳ ರವರು ಕಾರ್ಯನಿರ್ವಹಿಸಿದರು. ಜಿಲ್ಲೆಯ ವಿವಿಧ ಕಾಲೇಜುಗಳಿಂದ 105 ರೋವರ್ಸ್ ಮತ್ತು

ರೇಂಜರ್ಸ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು. ಈ ಶಿಬಿರದಲ್ಲಿ ದಡಾರ ಮತ್ತು ರುಬೆಲ್ಲಾ ಲಸಿಕೆಯ ಮಹತ್ವದ ಬಗ್ಗೆ ಜನರಿಗೆ ಅರಿವು ಮಾಡಿಸಲಾಯಿತು.

* ಫೆಬ್ರವರಿ 6 ರಿಂದ 12 ರವರೆಗೆ ಬೇತಮಂಗಲದಲ್ಲಿನ ಶ್ರೀ ಭವಾನಿ ಡಿ.ಇಡಿ., ಕಾಲೇಜಿನಲ್ಲಿ ಮೂಲ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ತರಬೇತಿಯನ್ನು ನಡೆಸಲಾಯಿತು, ಸ್ಕೌಟ್ಸ್ ವಿಭಾಗದ ಶಿಬಿರದ ನಾಯಕರಾಗಿ ಶ್ರೀ ಎಂ.ವಿ. ಜನಾರ್ದನ್, ಗೈಡ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ಎನ್. ಉಮಾದೇವಿ ಸೇವೆ ಸಲ್ಲಿಸಿದರು.



* ಫೆಬ್ರವರಿ 23 ರಂದು ಜಿಲ್ಲಾ ಮಟ್ಟದ ರ್‍ಯಾಲಿ ಹಾಗೂ ಸಂಸ್ಥಾಪಕರ ದಿನಾಚರಣೆಯನ್ನು ನಗರದ ಮಹಿಳಾ ಕಾಲೇಜಿನಲ್ಲಿ ಆಯೋಜಿಸಲಾಗಿತ್ತು. ಈ ಸಮಾರಂಭದ ಉದ್ಘಾಟನೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಯರಾಮರೆಡ್ಡಿ ರವರು ದೀಪ ಬೆಳಗುವ ಮೂಲಕ ನೆರವೇರಿಸಿ ಸಾಮಾಜಿಕ ಪಿಡುಗುಗಳ ನಿವಾರಣೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸದಸ್ಯರು ಮುಂದಾಗಲಿ ಎಂದು ಕರೆ ನೀಡಿದರು. ಈ ದಿನದ ವಿಶೇಷವಾಗಿ ಸ್ಕೌಟ್ಸ್ ವಿಭಾಗದಲ್ಲಿ ಲಾರ್ಡ್ ಬೇಡನ್ ಪಾವೆಲ್ ರವರ ಜೀವನ ಚರಿತ್ರೆ ಮತ್ತು ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಪಾವೆಲ್ ರವರ ಜೀವನ ಚರಿತ್ರೆ ಬಗ್ಗೆ ಪ್ರಬಂಧ ಸ್ಪರ್ಧೆಯನ್ನು ನಡೆಸಲಾಯಿತು, ವಿಜೇತರಿಗೆ ಇಂಗ್ಲೀಷ್ ನಿಘಂಟನ್ನು ನೀಡಿ ಅಭಿನಂದಿಸಲಾಯಿತು. ಸಮಾರಂಭದ ನಂತರ ನಗರದ ಬೀದಿಗಳಲ್ಲಿ ಜಾಥಾ ನಡೆಸಿ ನಗರದ ಸೋಮೇಶ್ವರ ದೇವಾಲಯದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಸೇರಿದಂತೆ ಪದಾಧಿಕಾರಿಗಳು ಹಾಜರಿದ್ದರು ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.



* ಫೆಬ್ರವರಿ 25 ರಂದು ಕೆ.ಜಿ.ಎಫ್ ಸ್ಥಳೀಯ ಸಂಸ್ಥೆ ವತಿಯಿಂದ ಸಂಸ್ಥಾಪಕರ ದಿನ ಮತ್ತು ರ್‍ಯಾಲಿಯನ್ನು ಆಯೋಜಿಸಲಾಗಿತ್ತು. ನಗರದ ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲರದ ಶ್ರೀ ನಾಗರಾಜ್ ರವರು ರ್‍ಯಾಲಿಗೆ ಚಾಲನೆ ನೀಡಿ ಸಂಸ್ಥೆಯಲ್ಲಿನ ಚಟುವಟಿಕೆಗಳು ಎಲ್ಲರಿಗೂ ಸಿಕ್ಕಿ ಸಮಾಜ ಅಭಿವೃದ್ದಿ ಕಾಣಲಿ ಎಂದು ಆಶಿಸಿದರು. ಸ್ಥಳೀಯ ಸಂಸ್ಥೆಯ ಪಧಾಧಿಕಾರಿಗಳು, ಶಿಕ್ಷಕರು ಮತ್ತು 623 ಮಕ್ಕಳು ಭಾಗವಹಿಸಿದ್ದರು.

* ಫೆಬ್ರವರಿ 26 ರಂದು ಆವನಿ ಜಾತ್ರೆಯ ಸಲುವಾಗಿ ಸಾರ್ವಜನಿಕರಿಗೆ ಊಟ ಮತ್ತು ಕುಡಿಯುವ ನೀರನ್ನು ಕ್ರಮಬದ್ದವಾಗಿ ಹಂಚುವ ಸೇವೆಯನ್ನು ಸುಮಾರು 51 ರೋವರ್ಸ್ ಮತ್ತು ರೇಂಜರ್ಸ್ ಗಳು ಮಾಡಿದರು. ಅದೇ ದಿನ ಬೆಟ್ಟಕ್ಕೆ ಚಾರಣವನ್ನು ನಡೆಸಲಾಯಿತು.

* ಮಾರ್ಚಿ 11 ರಂದು ಕೋಲಾರ ನಗರದ ಪತ್ರಕರ್ತರ ಭವನದಲ್ಲಿ ರಾಷ್ಟ್ರಪತಿ, ರಾಜ್ಯಪುರಸ್ಕಾರ, ಹಿರಖ್ ಪಂಕ್ ಮತ್ತು ಚತುರ್ಥ ಚರಣ್ ಪ್ರಶಸ್ತಿ ಪ್ರಧಾನ ಸಮಾರಂಭವನ್ನು ನಡೆಸಲಾಯಿತು.ಈ ಸಮಾರಂಭಕ್ಕೆ ಮುಖ್ಯ ಅಥಿತಿಗಳಾಗಿ ಆಗಮಿಸಿದ್ದ ಜಿಲ್ಲಾ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಶ್ರೀನಿವಾಸ್ ರಾವ್ ರವರು ವಿಧ್ಯಾರ್ಥಿಗಳಿಗೆ ಪ್ರಶಸ್ತಿ ಪ್ರಧಾನ ಮಾಡಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ನಮ್ಮ ಇಲಾಖೆಯೊಂದಿಗೆ ಕೋಟಿ ವೃಕ್ಷ ಆಂದೋಲನದಲ್ಲಿ ಉತ್ತಮವಾಗಿ ಭಾಗವಹಿಸುತ್ತಿದ್ದು ಪ್ರಶಂಸನೀಯವಾದ್ದದು. ಈ ಸಂಸ್ಥೆಯ ಎಲ್ಲಾ ಸದಸ್ಯರು ಪರಿಸರದ ಉಳಿವಿಗಾಗಿ ಕೆಲಸಮಾಡಿ ನಮ್ಮ ಸಮಾಜವನ್ನು ಉಳಿಸೋಣ ಎಂದರು.ಜಿಲ್ಲಾ ಸಂಸ್ಥೆಯ ಪಧಾಧಿಕಾರಿಗಳಾದ ಶ್ರೀ ಕೆ.ವಿ. ಶಂಕರಪ್ಪ, ಶ್ರೀಮತಿ ಜಯಶ್ರೀ, ಮುಂತಾದವರು ಭಾಗವಹಿಸಿದ್ದರು.

* ಮಾರ್ಚ್ 03 ರಂದು ಕೋಲಾರ ತಾಲ್ಲೂಕಿನ ಸೀಪೂರು ಗ್ರಾಮದಲ್ಲಿ ಜಿಲ್ಲಾ ಯುವಸಮಿತಿ ವತಿಯಿಂದ ಸಮುದಾಯ ಅಭಿವೃದ್ದಿ ಶಿಬಿರವನ್ನು ಕೈಗೊಂಡು ಗ್ರಾಮದ ಸ್ಮಶಾನದಲ್ಲಿ ಬೆಳೆದಿದ್ದ ಮುಳ್ಳಿನ ಗಿಡಗಳನ್ನು ತೆರವು ಮಾಡಿ ಗಿಡಗಳಿಗೆ ಪಾತಿಗಳನ್ನು ಮಾಡಿ ಗ್ರಾಮಸ್ಥರಿಗೆ ಮುಂದಿನ ಜೂನ್ ತಿಂಗಳಲ್ಲಿ ಮತ್ತಷ್ಟು ಗಿಡಗಳನ್ನು ನಾಟಿ ಮಾಡಲು ತಮ್ಮೆಲ್ಲರ ಸಹಕಾರಬೇಕು ಎಂದು ಮನವಿ ಮಾಡಲಾಯಿತು. ಇದೇ ದಿನ ರಾತ್ರಿ ಹುಣ್ಣಿಮೆ ಪ್ರಯುಕ್ತ ರಾಷ್ಟ್ರಪತಿ ರೋವರ್ ರೇಂಜರ್ ಪರೀಕ್ಷಾಂಶವಾದ ಗೀತ ಭಾರತಿಯ ಮೊದಲ ಕಾರ್ಯಕ್ರಮಕ್ಕೆ ಕೋಲಾರ ಜಿಲ್ಲೆಯ ಹೆಸರಾಂತ ವೈದ್ಯರಾದ ಡಾ॥ ಡಿ.ಕೆ. ರಮೇಶ್ ರವರು ಖಂಜರವನ್ನು ಬಾರಿಸುವ ಮೂಲಕ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲೆ ರೋವರ್ಸ್ ಮತ್ತು ರೇಂಜರ್ಸ್ ಗಳು ಸ್ವಚ್ಛ ಭಾರತ್ ಅಭಿಯಾನದ ಜಾಗೃತಿಯ ನಾಟಕ ಮತ್ತು ಹಾಡುಗಳನ್ನು ಹಾಡಿದರು.

## ಮಂಡ್ಯ



ಫೆಬ್ರವರಿ 22 ರಂದು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಕೆ.ಸಿ. ನಾಗಮ್ಮನವರ ಅಧ್ಯಕ್ಷತೆಯಲ್ಲಿ ಮಂಡ್ಯ ಜಿಲ್ಲಾ ಸ್ಕೌಟ್ ಭವನದಲ್ಲಿ ಸಂಸ್ಥಾಪಕ ದಿನಾಚರಣೆ ಹಾಗೂ ಚಿಂತನಾ ದಿನಾಚರಣೆ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಮಂಡ್ಯ ಜಿಲ್ಲಾ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಸಂಘದ ಕಾರ್ಯದರ್ಶಿ ಶ್ರೀ ಶಿವರಾಮುರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಅವರು ಸ್ಕೌಟಿಂಗ್-ಗೈಡಿಂಗ್ ಚಳವಳಿಯ ಬಗ್ಗೆ ಮಾತನಾಡಿ ಮಕ್ಕಳ ಜೀವನದಲ್ಲಿ ಶಿಸ್ತು ಎಷ್ಟು ಅಗತ್ಯ ಎಂಬುದರ ಬಗ್ಗೆ ಒತ್ತಿ ಹೇಳಿದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಗೈಡ್ ಆಯುಕ್ತೆಯವರು ಮಕ್ಕಳ ಪ್ರಗತಿಪರ ಶಿಕ್ಷಣದ ಬಗ್ಗೆ ಮಾತನಾಡಿ ಹೆಚ್ಚಿನ ಸಂಖ್ಯೆಯಲ್ಲಿ ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್‌ಗಳು ಜಿಲ್ಲೆಯಲ್ಲಿ ತಯಾರಾಗಬೇಕು ಎಂಬುದಾಗಿ ಹೇಳಿದರು. ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌಟ್ಸ್) ರವರಾದ ಶ್ರೀ ಎನ್. ಕೃಷ್ಣಮೂರ್ತಿಯವರು ಲಾರ್ಡ್ ಬೇಡನ್ ಪೊವೆಲ್ ಮತ್ತು ಲೇಡಿ ಬೇಡನ್ ಪೊವೆಲ್ ರವರ ಜೀವನ ಚರಿತ್ರೆ ಬಗ್ಗೆ ಮಾತನಾಡಿ ಈ ದಿನಾಚರಣೆಯ ಮಹತ್ವದ ಬಗ್ಗೆ ವಿವರಿಸಿದರು. ಶ್ರೀ ಡಿ. ಸ್ಯಾಮುಯಲ್ ಸತ್ಯಕುಮಾರ್ ಎ.ಎಲ್.ಟಿ. (ಸ್ಕೌಟ್ಸ್) ಹಾಗೂ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ರವರು ಸ್ಕೌಟ್ಸ್-ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡುತ್ತಾ ರಾಜ್ಯಪುರಸ್ಕಾರ ಮತ್ತು ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪ್ರಶಸ್ತಿ ಪಡೆಯಲು ಯಾವರೀತಿ ಸಿದ್ಧತೆ ಮಾಡಿಕೊಳ್ಳಬೇಕೆಂದು ವಿವರಿಸಿದರು. ಶ್ರೀಯುತ. ಕೆ.ಹೆಚ್. ಗಾಯಿತ್ರಿ, ಜಂಟಿಕಾರ್ಯದರ್ಶಿಗಳು ಜಿಲ್ಲಾ ಸಂಸ್ಥೆ ಮಂಡ್ಯ ಇವರು ವಂದನಾರ್ಪಣೆ ಮಾಡಿದರು.

## ಮಧುಗಿರಿ

* ಮಾರ್ಚ್ 1 ರಂದು ಶಿರಾ ತಾಲ್ಲೂಕು ಮೇಳವನ್ನು ನಗರದ ಸರ್ಕಾರಿ ಉರ್ದು ಪ್ರೌಢಶಾಲೆಯ ಮೈದಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಮೇಳವನ್ನು ಉದ್ಘಾಟಿಸಿ ಮಾತನಾಡಿದ ತಾಲ್ಲೂಕು ಪಂಚಾಯತಿ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರಾದ ಶ್ರೀಮತಿ ಹಂಸವೇಣಿ ಶ್ರೀನಿವಾಸ್ ಇವರು ಸ್ಕೌಟ್ಸ್-ಗೈಡ್ಸ್‌ನಿಂದ ಧೈರ್ಯ. ಉತ್ಸಾಹ ಶಿಸ್ತು ಬೆಯುವುದರ ಜೊತೆಗೆ ಸೇವಾ ಮನೋಭಾವನೆ ಬೆಳೆಯುತ್ತದೆ ಎಂದು ನುಡಿದರು. ಬಿ.ಇ.ಓ. ಹಾಗೂ ಕಾರ್ಯಾಧ್ಯಕ್ಷರು ಬಿ.ಎಸ್.ಜಿ. ಶಿರಾ ಇವರು ಮಾತನಾಡುತ್ತಾ ಕಾರ್ಯಕಾರಿಣಿ ಸಮಿತಿ ಅಧ್ಯಾಪಕರುಗಳು ಈ ನಿಟ್ಟಿನಲ್ಲಿ ದುಡಿಯಬೇಕೆಂದರು.



ಮಧುಗಿರಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಭಾಸ್ಕರ ರೆಡ್ಡಿ ದೇಶಪ್ರೇಮ, ಶಿಸ್ತುಬದ್ಧ ಜೀವನಕ್ಕೆ ಸ್ಕೌಟ್ಸ್-ಗೈಡ್ಸ್ ಸಹಕಾರಿ ಎಂದು ನುಡಿದರು. ಶ್ರೀ ಪಾತಲಿಂಗಯ್ಯ, ಸಹಾಯಕ ಜಿಲ್ಲಾ ಆಯುಕ್ತರು ಸರ್ವರನ್ನು ಸ್ವಾಗತಿಸಿ

ನಿವೇಶನದ ಅವಶ್ಯಕತೆ, ಕಟ್ಟಡದ ಬೇಡಿಕೆ ಇಟ್ಟರು. ಶ್ರೀ ವೀರಣ್ಣ ಖಜಾಂಚಿ ಇವರು ಸರ್ವರಿಗೂ ವಂದನಾರ್ಪಣೆ ಸಲ್ಲಿಸಿದರು. ಮಕ್ಕಳಿಗೆ ವಿನೋದಮಯ ಆಟಗಳು, ಸ್ಪರ್ಶಜ್ಞಾನ ಪರೀಕ್ಷೆ, ಚಿತ್ರಕಲೆ, ಪ್ರಶ್ನೋತ್ತರ ಕಾರ್ಯಕ್ರಮ, ಹಾಡುಗಾರಿಕೆ ಹಾಗೂ ಜಾಂಬೂರಿ ಅನುಭವಗಳ ಹಂಚಿಕೆಗೆ ಅವಕಾಶ ನೀಡಲಾಗಿತ್ತು.

## ರಾಯಚೂರು



ಮಾರ್ಚ್ 7 ರಂದು ರಾಯಚೂರು ಜಿಲ್ಲಾಸಂಸ್ಥೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಇವರುಗಳ ಸಹಯೋಗದಲ್ಲಿ ದಿ. ವಿ.ಪಿ. ದೀನದಯಾಳು ನಾಯ್ಡು ಇವರ ಜನ್ಮ ಶತಮಾನೋತ್ಸವ ಸ್ಮರಣಾರ್ಥವಾಗಿ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್ ಮೇಳವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಂದು ಬೆಳಿಗ್ಗೆ ರ್‍ಯಾಲಿಯನ್ನು ಉದ್ಘಾಟಿಸಿ ಮಾತನಾಡಿದ ರಾಯಚೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ಎಂ. ಕೂರ್ಮಾರಾವ್ ಸಮಾಜದಲ್ಲಿ ಪ್ರಾಮಾಣಿಕತೆಯಿಂದ ಎಲ್ಲ ಚಟುವಟಿಕೆಗಳಲ್ಲಿ ಪಾಲ್ಗೊಂಡು ಶಿಸ್ತಿನಿಂದ ಸೇವೆ ಸಲ್ಲಿಸುವುದರೊಂದಿಗೆ ದೇಶಕ್ಕೆ ಮಾದರಿಯಾಗಿರುವುದು ಹೆಮ್ಮೆಯ ಸಂಗತಿಯಾಗಿದೆ ಹಾಗೂ ಜಿಲ್ಲಾ ಸಂಸ್ಥೆಯು ಉತ್ತಮವಾದ ಕಾರ್ಯಚಟುವಟಿಕೆ ಗಳನ್ನು ನಿರ್ವಹಿಸುತ್ತಿದೆ ಎಂದು ಅಭಿಪ್ರಾಯಪಟ್ಟರು .



ನಂತರ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಗೆ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ರ್‍ಯಾಲಿಯಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಇವರು ಭಾಗವಹಿಸಿ ಎಲ್ಲರಿಗೂ ಶುಭ ಕೋರಿದರು. ಈ ಸಂದರ್ಭದಲ್ಲಿ ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಶಿವಮೊಗ್ಗ



ಫೆಬ್ರವರಿ 27 ರಂದು ಶಿವಮೊಗ್ಗ ತಾಲ್ಲೂಕಿನ ಕುವೆಂಪು ರಂಗಮಂದಿರದಲ್ಲಿ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರಧಾನ ಸಮಾರಂಭವನ್ನು ಏರ್ಪಸಿಡಲಾಗಿತ್ತು. ಅಪರ ಜಿಲ್ಲಾಧಿಕಾರಿ ಶ್ರೀ ಕೆ. ಚನ್ನಬಸಪ್ಪ ರವರು ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್‌ಗಳಿಗೆ ಪ್ರಶಸ್ತಿ ಪ್ರಧಾನ ಮಾಡಿ ಸಂವಿಧಾನದಲ್ಲಿ ಉಲ್ಲೇಖಿಸಿರುವ ಮೂಲಭೂತ ಕರ್ತವ್ಯಗಳನ್ನು ನಿಭಾಯಿಸದವರು ಎಂದಿಗೂ ಹಕ್ಕುಗಳನ್ನು ಕೇಳಲು ಅರ್ಹರಲ್ಲ. ಇಂದು ಹಕ್ಕುಗಳ ಬಗ್ಗೆ ಮಾತನಾಡುವವರ ಸಂಖ್ಯೆ ಹೆಚ್ಚಿದೆ. ಆದರೆ ಕರ್ತವ್ಯಗಳ ಬಗ್ಗೆ ಹೆಚ್ಚು ಜನ ತಲೆಕೆಡಿಸಿಕೊಂಡಿಲ್ಲ ಎಂದರು.

ಇದೇ ಸಂದರ್ಭದಲ್ಲಿ ಹಿರಿಯ ಜಿಲ್ಲಾ ಸಹಾಯಕ ಆಯುಕ್ತರುಗಳನ್ನು ಹಾಗೂ ಹಿರಿಯ ಸ್ಕೌಟರ್ಸ್-ಗೈಡರ್ಸ್‌ಗಳನ್ನು ಸನ್ಮಾನಿಸಲಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶಶಾಸ್ತ್ರಿರವರು ಬಂದಂತಹ ಎಲ್ಲ ಸ್ಕೌಟ್-ಗೈಡ್‌ಗಳಿಗೂ ಹಾಗೂ ಸನ್ಮಾನಿಸಲಾದ ಎಲ್ಲಾ ಹಿರಿಯ ಎ.ಡಿ.ಸಿ., ಸ್ಕೌಟರ್ಸ್-ಗೈಡರ್ಸ್‌ಗಳಿಗೂ ಶುಭಕೋರಿದರು. ಸ್ವಾಗತವನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಮಾಡಿದರು.



ಪ್ರಾಸ್ತಾವಿಕ ನುಡಿಯನ್ನು ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಉಮೇಶಶಾಸ್ತ್ರಿಯವರು ನಿರ್ವಹಿಸಿದರೆ. ಕಾರ್ಯಕ್ರಮದ ನಿರೂಪಣೆಯನ್ನು ಡಿ.ಟಿ.ಸಿ. ಶ್ರೀ ಎ.ವಿ. ರಾಜೇಶ್ ಹಾಗೂ ಎ.ಎಸ್.ಓ.ಸಿ., ಶ್ರೀಮತಿ ಭಾರತಿ ಡಾಯಸ ರವರು ನಿರ್ವಹಿಸಿದರು. ವಂದನಾರ್ಪಣೆಯನ್ನು ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮೀ ನಿರ್ವಹಿಸಿದರು. 1000 ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್, ದಳ ನಾಯಕ/ನಾಯಕಿಯರುಗಳು ಹಾಜರಿದ್ದರು.

## ತುಮಕೂರು

ಫೆಬ್ರವರಿ 22 ರಂದು ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ಮಹಾತ್ಮಗಾಂಧಿ ಪದವಿಪೂರ್ವ ಕಾಲೇಜ್ ಕುಣಿಗಲ್‌ನಲ್ಲಿ ಸ್ಥಳೀಯ ಸಂಸ್ಥೆ ಖಜಾಂಚಿಯವರಾದ ಶ್ರೀ ಎಲ್ ಯತೀಶ್ ಕುಮಾರ್, ಸ್ಕೌಟ್ ಮಾಸ್ಟರ್ ಶ್ರೀ ಶಿವಪ್ರಕಾಶ್ ನೇತೃತ್ವದಲ್ಲಿ ಸಂಸ್ಥಾಪಕರ ದಿನಾಚರಣೆಯನ್ನು ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಶ್ರೀ ಎಲ್. ಯತೀಶ್‌ಕುಮಾರ್ ಬಿ.ಪಿ.ಯವರ ಬಗ್ಗೆ ತಿಳಿಸಿದರು. ಶ್ರೀ ಶಿವಪ್ರಕಾಶ್ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಸೋಮಶೇಖರ್ ಪ್ರಭಾರಿ ಮುಖ್ಯ ಶಿಕ್ಷಕರು, ಅಧ್ಯಕ್ಷತೆ ವಹಿಸಿದ್ದರು. ಶಿಕ್ಷಕರಾದ ಶ್ರೀ ರಾಮಚಂದ್ರ, ಶ್ರೀ ಚಿತ್ತಯ್ಯ, ಶ್ರೀ ಜಗದೀಶ್ ರವರು ಕಾರ್ಯಕ್ರಮದಲ್ಲಿ ಹಾಜರಿದ್ದರು. ಒಟ್ಟು 30 ಸ್ಕೌಟ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

* ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಶೈಕ್ಷಣಿಕ ಪ್ರಗತಿಗೆ ಪೂರಕವಾದ ಭಾರತ್ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮೇಳ ಮಹತ್ವಪೂರ್ಣವಾದುದೆಂದು ಬಿಜೆಪಿ ಜಿಲ್ಲಾ ಹಿಂದುಳಿದ ವರ್ಗ ಮೋರ್ಚಾದ ಅಧ್ಯಕ್ಷ ಶ್ರೀ ಜಿ.ಎನ್. ಬೆಟ್ಟಸ್ವಾಮಿ ತಿಳಿಸಿದರು. ಫೆಬ್ರವರಿ 7 ರಂದು ಗುಬ್ಬಿ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜು ಮೈದಾನದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮೇಳದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತಿದ್ದರು. ಅಕ್ಷರ ದಾಸೋಹ ಸಹಾಯಕ ನಿರ್ದೇಶಕ ಶ್ರೀ ಯೋಗಾನಂದ ಮಾತನಾಡಿ ಪ್ರಪಂಚದ 180 ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸ್ಕೌಟ್ಸ್-ಗೈಡ್ಸ್ ಶೈಕ್ಷಣಿಕ ಕ್ಷೇತ್ರದಲ್ಲಿ ಅಪ್ರತಿಮ ಸಾಧನೆ ಮಾಡಿದೆ ಎಂದರು. ತಾಲ್ಲೂಕು ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಅಧ್ಯಕ್ಷ ಶ್ರೀ ಜಿ.ಆರ್. ಶಿವಕುಮಾರ್ ಮಾತನಾಡಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಯ ಜೊತೆಗೆ ನಮ್ಮ ಸಾಮಾಜಿಕ ಮೌಲ್ಯಗಳನ್ನು ಮತ್ತಷ್ಟು ಹೆಚ್ಚಿಸಲು ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದು ವಿದ್ಯಾರ್ಥಿಗಳು ಶಿಕ್ಷಣದ ಜೊತೆಗೆ ಸ್ಕೌಟ್ಸ್-ಗೈಡ್ಸ್‌ಗೆ ಸೇರುವ ಮೂಲಕ ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಗತಿ ಹೊಂದುವಂತೆ ತಿಳಿಸಿದರು. ತಾಲ್ಲೂಕು ಪಂಚಾಯ್ತಿ ಸದಸ್ಯ ಶ್ರೀ ಅ.ನಾ. ಲಿಂಗಪ್ಪ ಮಾತನಾಡಿ ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ಸಾಮಾಜಿಕ ಮೌಲ್ಯಗಳನ್ನು ಕಲಿಸಿಕೊಡುವತ್ತ ಶಿಕ್ಷಕ ಸಮುದಾಯ ಚಿಂತನೆ ನಡೆಸಬೇಕಿದೆ ಎಂದರು.

ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜು ಮೈದಾನದಿಂದ ಪಟ್ಟಣದ ಪ್ರಮುಖ ಬೀದಿಗಳಲ್ಲಿ ತಾಲ್ಲೂಕಿನ 600 ಕ್ಕೂ ಹೆಚ್ಚು ವಿದ್ಯಾರ್ಥಿಗಳು ಪಥಸಂಚಲನ ನಡೆಸಿ ನಂತರ ಶ್ರೀ ಚನ್ನಬಸವೇಶ್ವರಸ್ವಾಮಿ ದೇವಾಲಯದ ಆವರಣದಲ್ಲಿ ಸ್ವಚ್ಛತಾ ಕಾರ್ಯ ನಡೆಸಿದರು. ಆನಂತರ ಕಾಲೇಜು ಮೈದಾನದಲ್ಲಿ ಮಕ್ಕಳಿಗೆ ವಿವಿಧ ರೀತಿಯ ಸಾಹಸ ಮತ್ತು ಶೈಕ್ಷಣಿಕ ಪ್ರಗತಿಗೆ ಪೂರಕವಾದ ಚಟುವಟಿಕೆಗಳನ್ನು ನಡೆಸಲಾಯಿತು. ಮೇಳದಲ್ಲಿ ಜಿಲ್ಲಾ ಪದಾಧಿಕಾರಿಗಳು ರೋಟರಿ ಸಂಸ್ಥೆಯ ಅಧ್ಯಕ್ಷ ಶ್ರೀ ಹೆಚ್.ಎಸ್. ದಯಾನಂದಮೂರ್ತಿ, ಲಯನ್ಸ್ ಸಂಸ್ಥೆಯ ಅಧ್ಯಕ್ಷ ಶ್ರೀ ಎಸ್.ಆರ್.ಎಸ್. ರೇಣುಕಯ್ಯ, ಲಯನ್ಸ್ ಟ್ರಸ್ಟ್ ಅಧ್ಯಕ್ಷ ಕೆ.ಎಲ್. ಗೋಪಾಲಕೃಷ್ಣಶೆಟ್ಟಿ, ನಿವೃತ್ತ ಬಿಇಒ ಶ್ರೀ ಕೆಂಪರಂಗಯ್ಯ, ಜಿಲ್ಲಾ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘದ ಉಪಾಧ್ಯಕ್ಷ ಶ್ರೀ ಹೆಚ್.ಕೆ. ಕರಿಯಪ್ಪ, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.



* ಜನವರಿ 30 ರಂದು ತುಮಕೂರು ತಾಲ್ಲೂಕು ಮಟ್ಟದ ರ್‍ಯಾಲಿ ಮತ್ತು ಕುಷ್ಠರೋಗ ನಿವಾರಣಾ ದಿನವನ್ನು ಹಮ್ಮಿಕೊಳ್ಳಲಾಗಿತ್ತು. ಬೆಳಗ್ಗೆ ನಡೆದ ಪಥಚಲನೆ ಕಾರ್ಯಕ್ರಮಕ್ಕೆ ಚಾಲನೆ ನೀಡಲು ತುಮಕೂರಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಸವರಾಜು,

ಶ್ರೀಮತಿ ಕಾಮಾಕ್ಷಮ್ಮ, ಇ.ಒ., ಆರೋಗ್ಯ ಇಲಾಖೆಯಿಂದ ಡಾ॥ ವೀರಭದ್ರಯ್ಯ, ಪಿ.ಎಸ್., ಡಾ॥ ಪರಮೇಶ್ವರಪ್ಪ, ಐಎಂಎ ಅಧ್ಯಕ್ಷರು, ಡಾ॥ ಚೇತನ್, ಡಿಎಲ್‌ಒ, ಡಾ॥ ರಂಗೇಗೌಡರು, ಐಎಂಎ ಕಾರ್ಯದರ್ಶಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪದಾಧಿಕಾರಿಗಳು ಆಗಮಿಸಿದ್ದರು. ನಂತರ ಪ್ರಥಮ ದರ್ಜೆ ಕಾಲೇಜ್ ಆವರಣದಲ್ಲಿ ಧ್ವಜಾರೋಹಣ ಕಾರ್ಯಕ್ರಮವನ್ನು ನಡೆಸಲಾಯಿತು.

ನಂತರ ಸುಮಾರು 12.00 ಗಂಟೆಗೆ "ಹಿಸ್ಟರಿ ಆಫ್ ಸ್ಕೌಟಿಂಗ್" ವಿಷಯದ ಬಗ್ಗೆ ಪ್ರಬಂಧ, ಸಂಗೀತ ಮತ್ತು ನೃತ್ಯಗಳನ್ನು ಮಾಡಿಸಲಾಯಿತು. ನಂತರ 2.30ಕ್ಕೆ 'ರಸಪ್ರಶ್ನೆ', ಸಾಹಸದ ಚಟುವಟಿಕೆಗಳು ಮತ್ತು ಸ್ನೇಹಮಯ ವಿನೋದ ಆಟಗಳನ್ನುಆಡಿಸಲು ಎಲ್ಲಾ ಶಾಲೆಯ ಶಿಕ್ಷಕ-ಶಿಕ್ಷಕಿಯರು ಉತ್ತಮ ಸಹಕಾರ ನೀಡಿದರು. ಸಮಾರೋಪ ಸಮಾರಂಭದಲ್ಲಿ ಕಾರ್ಯಕ್ರಮದ ಯಶಸ್ವಿಯ ಬಗ್ಗೆ ಪ್ರೊ. ಹರೀಶ್, ಪ್ರಾಂಶುಪಾಲರು ಮಾತನಾಡಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬೆಳ್ಳಿ ಲೋಕೇಶ್ ಬಹಳ ಉತ್ಸುಕರಾಗಿ ಮಕ್ಕಳು ಆನಂದಿಸಿದ ಕ್ಷಣಗಳ ಬಗ್ಗೆ ಮತ್ತು ಆರೋಗ್ಯದ ಬಗ್ಗೆ ಮಾರ್ಗದರ್ಶನ ನೀಡಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ರಮೇಶ್ ಟಿ.ಎಸ್. ರವರು ವಂದನಾರ್ಪಣೆ ಮಾಡಿದರು.

* ಫೆಬ್ರವರಿ 9 ರಂದು ತುಮಕೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಪದವಿ ಪೂರ್ವ ಕಾಲೇಜಿನ ಉಪನ್ಯಾಸ-ಉಪನ್ಯಾಸಕಿಯರಿಗೆ ಮಾಹಿತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ತುಮಕೂರು ನಗರದ ಬಟವಾಡಿಯ ಚೇತನ ವಿದ್ಯಾಮಂದಿರದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ವಿವಿಧ ಕಾಲೇಜುಗಳ ಸುಮಾರು 150 ಉಪನ್ಯಾಸ ಉಪನ್ಯಾಸಕಿಯರು ಭಾಗವಹಿಸಿದ್ದರು. ರೋಟೇರಿಯನ್ ಶ್ರೀ ಎನ್.ಆರ್. ಜಗದೀಶ್, ವಾಣಿಜ್ಯೋದ್ಯಮಿಗಳು ಹಾಗು ಟಿ.ಜಿ.ಎಂ. ಕೋ-ಆಪರೇಟೀವ್ ಬ್ಯಾಂಕ್ ಅಧ್ಯಕ್ಷರು ದೀಪ ಬೆಳಗಿಸುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿ ಶುಭ ಹಾರೈಸಿದರು.




ರಾಜ್ಯ ಮುಖ್ಯ ಆಯುಕ್ತ ಹಾಗೂ ಮಾಜಿ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಾ ಪ್ರಸ್ತುತ ರಾಜ್ಯದಲ್ಲಿ ಸ್ಕೌಟ್-ಗೈಡ್‌ಗಳ ಸಂಖ್ಯೆ 4.5 ಲಕ್ಷದಷ್ಟಿದ್ದು ಇದನ್ನು 10 ಲಕ್ಷಕ್ಕೆ ಏರಿಸುವ ಗುರಿಯಿದೆ ಎಂದರು. ಸತತ ಪ್ರಯುತ್ನಗಳ ಫಲವಾಗಿ ಎನ್.ಸಿ.ಸಿ., ಮತ್ತು ಎನ್.ಎಸ್.ಎಸ್. ಮಾದರಿಯಲ್ಲಿ ಕಾಲೇಜುಗಳಲ್ಲಿಯೂ ರೋವರ್-ರೇಂಜರ್ ಘಟಕಗಳು ಪ್ರಾರಂಭವಾಗಿವೆ ಎಂದು ನುಡಿದರು. ಪದವಿಪೂರ್ವ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಕೆ. ಕೃಷ್ಣಸ್ವಾಮಿ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್ ಜಿಲ್ಲಾ ಆಯುಕ್ತರುಗಳಾದ ಶ್ರೀ ವೇಣುಗೋಪಾಲಕೃಷ್ಣ, ಶ್ರೀಮತಿ ಸುಭಾಷಿಣಿ, ಸಹಾಯಕ ರಾಜ್ಯ ಆಯುಕ್ತರುಗಳಾದ ಶ್ರೀಮತಿ ಬಿ.ವಿ. ರಾಮಲತ ಮತ್ತು ಡಾ. ಬಿ.ಎಲ್. ಭಾಗ್ಯಲಕ್ಷ್ಮಿ ಹಾಗೂ ರಾಜ್ಯ ಸ್ಥಾನಿಕ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ನಂತರ ನಡೆದ ಕಾರ್ಯಕ್ರಮದಲ್ಲಿ ಡಾ. ಭಾಗ್ಯಲಕ್ಷ್ಮಿ, ಶ್ರೀಮತಿ ಬಿ.ವಿ. ರಾಮಲತಾ ಮತ್ತು ಶ್ರೀ ಎನ್. ಶ್ರೀನಿವಾಸನ್ ಅವರುಗಳು ಸ್ಕೌಟಿಂಗ್-ಗೈಡಿಂಗ್ ಚಳವಳಿಯ ವಿವಿಧ ವಿಷಯಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಿದರು.

* ಫೆಬ್ರವರಿ 22 ರಂದು ತುಮಕೂರು ಜಿಲ್ಲೆಯ ಬಿ.ಹೆಚ್. ರಸ್ತೆಯಲ್ಲಿರುವ ಶ್ರೀ ಸಿದ್ಧಗಂಗಾ ಪ್ರಾಯೋಗಿಕ ಎಲಿಮೆಂಟರಿ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಮಹಾ ಚಳವಳಿಯ ಜನಕ "ಲಾರ್ಡ್ ಬೇಡನ್ ಪೋವೆಲ್" ರವರ ಜನ್ಮ ದಿನಾಚರಣೆಯನ್ನು ಸ್ಥಳೀಯ ಹಲವು ಶಾಲೆಗಳ ಸಹಯೋಗದೊಂದಿಗೆ ಏರ್ಪಡಿಸಲಾಗಿತ್ತು. ತುಮಕೂರು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬೆಳ್ಳಿ ಲೋಕೇಶ್‌ರವರು ಸಸಿಗೆ ನೀರುಣಿಸುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆಯ



ಉಪಾಧ್ಯಕ್ಷರಾದ ಶ್ರೀ ಕುಮಾರ್ ಉಪ್ಪಾರಳ್ಳಿ ರವರು ಮಕ್ಕಳ ಕೌಶಲ್ಯ ಮೆಚ್ಚಿ ಬಹುಮಾನಗಳನ್ನು ನೀಡಿದರು. ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ ಮಾಡಿಸಲಾಯಿತು. ಶ್ರೀ ಚಂದ್ರಶೇಖರ್ ಡಿ.ಓ., ಅಡಿಗೆ ಕೌಶಲ್ಯದ ಮಹತ್ವದ ಬಗ್ಗೆ ಮಾತನಾಡಿದರು. ಕಾರ್ಯಕ್ರಮದ ನಿರೂಪಣೆಯನ್ನು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಎಸ್. ರಮೇಶ್ ನೆರವೇರಿಸಿದರು. ಸ್ವಾಗತವನ್ನು ಶ್ರೀ ಬಿ.ವಿ. ನಾಗಭೂಷಣ್ ಮಾಡಿದರು. ಶಾಲಾ ಮುಖ್ಯ ಶಿಕ್ಷಕರಾದ ಶ್ರೀ ಹೆಚ್. ಷಡಕ್ಷರಯ್ಯ ರವರು ಸ್ಥಳೀಯ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಎಲ್ಲಾ ಮಕ್ಕಳಿಗೂ ಶುಭ ಹಾರೈಸಿದರು. ನಂತರ ಶ್ರೀ ಪ್ರದೀಪ್ ವಂದನಾರ್ಪಣೆ ಮಾಡಿದರು.

* ಫೆಬ್ರವರಿ 22 ರಂದು ತುಮಕೂರು ಜಿಲ್ಲಾ ಸಂಸ್ಥೆ ವತಿಯಿಂದ "ವಿಶ್ವ ಭ್ರಾತೃತ್ವ ದಿನಾಚರಣೆ"ಯನ್ನು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಸುಭಾಷಿಣಿ ಅವರು ಅಧ್ಯಕ್ಷತೆಯಲ್ಲಿ ಹಮ್ಮಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ಕಾರ್ಯದರ್ಶಿ ಶ್ರೀ ಸುರೇಂದ್ರ ಷಾ, ಮಹಾನಗರ ಪಾಲಿಕೆ ಕಾರ್ಪೋರೇಟರ್, ಶ್ರೀ ನಾಗರಾಜ್, ಆಗಮಿಸಿದ್ದರು. ಶ್ರೀ ಬೆಳ್ಳಿ ಲೋಕೇಶ್, ಶ್ರೀ ಕೆಂಪರಂಗಯ್ಯ ಎ.ಡಿ.ಸಿ.(ಎಸ್.) ಶ್ರೀ ಗಂಗಯ್ಯ ಎ.ಡಿ.ಸಿ.(ಎಸ್.) ಉಪಾಧ್ಯಕ್ಷರಾದ ಶ್ರೀ ಕುಮಾರಯ್ಯ, ಶ್ರೀ ಬಸವಲಿಂಗ ಶಾಸ್ತ್ರಿಗಳು ಡಿ.ಓ., ರೋವರ್/ರೇಂಜರ್‌ಗಳು ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳಿಗೆ ಉಚಿತ ಸಮವಸ್ತ್ರ ವಿತರಿಸಲಾಯಿತು.



* ಫೆಬ್ರವರಿ 4 ರಂದು ತಾಲ್ಲೂಕು ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮೇಳವನ್ನು ಮಾಯಸಂದ್ರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಂದು ಬೆಳಗ್ಗೆ 10.00 ಗಂಟೆಗೆ ಸ॥ ಹಿ॥ಪ್ರಾ॥ ಶಾಲೆ, ಮಾಯಸಂದ್ರ ಶಾಲಾ ಆವರಣದಲ್ಲಿ ಶ್ರೀ ಸಿ.ರಂಗಧಾಮಯ್ಯ, ಬಿ.ಇ.ಓ., ಶ್ರೀ ಉಮೇಶ್‌ಗೌಡ, ಬಿಆರ್‌ಸಿ., ಶ್ರೀ ಚಿದಾನಂದಮೂರ್ತಿ, ಪಿಇಒ., ಶ್ರೀ ಮಾ.ಸು.ಅನಂತ, ಶ್ರೀ ಧನಪಾಲ್, ಅಧ್ಯಕ್ಷರು, ಶ್ರೀ ಕೆಂಪರಂಗಯ್ಯ, ಶ್ರೀ ಚಂದ್ರಶೇಖರ್, ಜಿಲ್ಲಾ ಆಯುಕ್ತರು, ಶ್ರೀ ನರಸಿಂಹಯ್ಯ, ಸ್ವಾತಂತ್ರ್ಯ ಹೋರಾಟಗಾರರು, ಇವರ ಉಪಸ್ಥಿತಿಯಲ್ಲಿ ಧ್ವಜಾರೋಹಣ ನೆರವೇರಿಸಲಾಯಿತು. ನಂತರ ಬೇಡನ್ ಪೊವೆಲ್ಲರ ಫೋಟೋ ಹಾಗೂ ಬ್ಯಾನರ್ ಹಿಡಿದು ಗಣ್ಯರೊಂದಿಗೆ ನಗರದ ಮುಖ್ಯ ಬೀದಿಗಳಲ್ಲಿ ಪಥಚಲನ ನೆರವೇರಿತು. ಶ್ರೀ ಸಿ. ರಂಗಧಾಮಯ್ಯ, ಬಿಇಒ, ಇವರು ದೀಪಬೆಳಗುವುದರ ಮೂಲಕ ತಾಲ್ಲೂಕು ರ್‍ಯಾಲಿಗೆ ಚಾಲನೆ ನಿಡಿದರು. ಈ ಸಂಸ್ಥೆ ವಿಶ್ವವ್ಯಾಪಿ ಆವರಿಸಿ ಎತ್ತರಕ್ಕೆ ಬೆಳೆಯಲಿ, ಜ್ಯೋತಿಯಂತೆ ಪಸರಿಸಲಿ ಎಂಬುದಾಗಿ ಆಶಿಸಿದರು.

ಶ್ರೀ ಪಿ.ಹೆಚ್. ಧನಪಾಲ್, ಖ್ಯಾತ ವಕೀಲರು, ಅಧ್ಯಕ್ಷತೆ ವಹಿಸಿದ್ದರು. ಇವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಶಿಕ್ಷಣದ ಕಿಚ್ಚನ್ನು ಹಚ್ಚಿ ಮಾಯಸಂದ್ರವನ್ನು ಸಂಭ್ರಮಗೊಳಿಸಿ ಶಿಸ್ತನ್ನು ಬೆಳಗಿದ ಮಕ್ಕಳಿಗೂ ರ್‍ಯಾಲಿಯ ಯಶಸ್ವಿಗೆ ಶ್ರಮಿಸಿದ ಕಾರ್ಯದರ್ಶಿಗಳಿಗೂ ಹಾಗೂ ಮಾಯಸಂದ್ರ ಹಿರಿಯ ಗಣ್ಯರಿಗೂ ಅಭಿನಂದನೆಗಳನ್ನು ಸಲ್ಲಿಸಿದರು. ಶ್ರೀ ಕೆ.ಎಸ್. ಚಂದ್ರಶೇಖರಯ್ಯ, ಜಿಲ್ಲಾ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ರಫೀಕ್, ಸ್ಕೌಟ್ ಮಾಸ್ಟರ್‌ರವರು ಎಲ್ಲರಿಗೂ ವಂದಿಸಿದರು.

* ಮಾರ್ಚ್ 3 ರಿಂದ 5 ರ ವರೆಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ತುಮಕೂರು ಇಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲೆಯ ವಿವಿಧ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ರೋವರ್-ರೇಂಜರ್‌ಗಳಿಗೆ ನಿಪುಣ್ ತರಬೇತಿ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರಾದ ಶ್ರೀ ವೇಣುಗೋಪಾಲಕೃಷ್ಣರವರು ವಹಿಸಿದ್ದರು. ಉದ್ಘಾಟನೆಯನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಹೆಚ್. ಹರೀಶ್‌ರವರು ನೆರವೇರಿಸಿ, ಮಕ್ಕಳ ಉತ್ತಮ ಭವಿಷ್ಯವನ್ನು ರೂಪಿಸುವಲ್ಲಿ ಸ್ಕೌಟ್ಸ್-ಗೈಡ್ಸ್ ತರಬೇತಿಯನ್ನು ನೀಡುತ್ತದೆ ಹಾಗೂ ಉತ್ತಮ ವ್ಯಕ್ತಿತ್ವವನ್ನು ರೂಪಿಸುತ್ತದೆ ಎಂದರು. ಶ್ರೀಮತಿ ಸುಭಾಷಿಣಿ ರವೀಶ್ ಜಿಲ್ಲಾ ಆಯುಕ್ತರು (ಗೈಡ್ಸ್) ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಂದ್ರ ಷಾ, ಎ.ಡಿ.ಸಿ. ಗಳಾದ ಶ್ರೀ ಗಂಗಯ್ಯ, ಶ್ರೀ ಕೆಂಪರಂಗಯ್ಯನವರು ಭಾಗವಹಿಸಿದ್ದರು. ನಾಯಕರಾಗಿ ಶ್ರೀ ಎನ್. ಅಶೋಕ್ ಕುಮಾರ್ ರವರು ಮತ್ತು ಶ್ರೀಮತಿ ರಾಮಲತಾ, ಸಹಾಯಕ ರಾಜ್ಯ ಆಯುಕ್ತರು ಭಾಗವಹಿಸಿದ ತರಬೇತುಗೊಳಿಸಿದರು. ಜಿಲ್ಲೆಯಿಂದ 110 ರೋವರ್-ರೇಂಜರ್‌ಗಳು ಶಿಬಿರದಲ್ಲಿ ಪಾಲ್ಗೊಂಡಿದ್ದರು.

## ಉಡುಪಿ



ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್ ಸ್ಥಾಪಕರ ದಿನಾಚರಣೆಯ ಪ್ರಯುಕ್ತ ಸ್ವಚ್ಛತಾ ಜನಜಾಗೃತಿ ಸೈಕಲ್ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಸಂಜೆ 5 ಗಂಟೆ ರಾಜಾಂಗಣದಿಂದ ಹೊರಟು, ಬನ್ನಂಜೆ ಮಾರ್ಗ, ಹಳೆ ಜಿಲ್ಲಾಧಿಕಾರಿ ಕಛೇರಿ, ಬ್ರಹ್ಮಗಿರಿ ತಾಲೂಕ ಕಛೇರಿ ನಗರಸಭೆ ಕಛೇರಿ, ಸರ್ವೀಸ್ ಬಸ್ ನಿಲ್ದಾಣ, ಸಿಟಿ ಬಸ್ ನಿಲ್ದಾಣ ಮೂಲಕ ವಾಪಸ್ ರಾಜಾಂಗಣದಲ್ಲಿ ಮುಕ್ತಾಯವಾಯಿತು. ಸೈಕಲ್ ಜಾಥಾ ಕಾರ್ಯಕ್ರಮಕ್ಕೆ ಶ್ರೀ ಗಂಗಾಧರ್ ರಾವು ಇಂಜಿನಿಯರ್ ಇವರು ಚಾಲನೆ ನೀಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಉತ್ತಮ ಕಾರ್ಯಕ್ರಮ ಹಮ್ಮಿಕೊಂಡು ದೇಶದ ಪ್ರಗತಿಗೆ ತನ್ನದೇ ಆದ ಕೊಡುಗೆ ನೀಡುತ್ತಿದೆ ಎಂದರು.



ಜಿಲ್ಲಾ ಪದಾಧಿಕಾರಿಗಳಾದ ಶ್ರೀ ಶೇಖರ್ ಪೂಜಾರಿ, ಡಾ॥ ಜಯರಾಮ್ ಶೆಟ್ಟಿಗಾರ್, ಶ್ರೀ ಆನಂದ ಅಡಿಗ, ಉಪಸ್ಥಿತರಿದ್ದರು. 25 ಸ್ಕೌಟ್-ಗೈಡ್ ಸ್ವಯಂಸೇವಕರು, ಸೈಕಲ್ ಜಾಥಾದಲ್ಲಿ, "ಸ್ವಚ್ಛಭಾರತ್-ಅಚ್ಛಾಭಾರತ್", "ಕಾಡು ಬೆಳೆಸಿ, ನಾಡು ಉಳಿಸಿ", "ಭೇಟಿ ಬಚಾವೋ ಭೇಟಿ ಪಡಾವೋ", "ಜೈ ಜವಾನ್ ಜೈ ಕಿಸಾನ್", "ನೀರು ಮಿತವಾಗಿ ಬಳಸಿ", ಘೋಷಣೆ ಕೂಗುತ್ತಾ, ಜನರಲ್ಲಿ ಜಾಗೃತಿ ಮೂಡಿಸಿದರು.

## ಯಾದಗಿರಿ



ಫೆಬ್ರವರಿ 22 ರಂದು ಸಂಸ್ಥಾಪಕರ ದಿನ, ಚಿಂತನಾದಿನ ಹಾಗೂ ದೀನದಯಾಳು ನಾಯ್ಡು ರವರ ಜನ್ಮ ಶತಮಾನೋತ್ಸವ ಪ್ರಯುಕ್ತ ಜಿಲ್ಲಾ ಸಂಸ್ಥೆ ವತಿಯಿಂದ ಯಾದಗಿರಿ ನಗರದ 7ನೇ ವಾರ್ಡ್‌ನಲ್ಲಿ ಸ್ವಚ್ಛತಾ ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಶ್ರೀ ಶಶಿಧರ ರಡ್ಡಿ, ಹೊಸಳ್ಳಿ ನಗರಸಭೆ ಅಧ್ಯಕ್ಷರು ಮಾತನಾಡಿ, ಜಿಲ್ಲಾ ಸ್ಕೌಟ್-ಗೈಡ್‌ಗಳಲ್ಲಿ ಧೈರ್ಯಶಾಲಿಗಳು ಹಾಗೂ ಸಮಾಜಮುಖಿ ಕಾರ್ಯಮಾಡಲು ಉಳಿದವರಿಗೆ ಪ್ರೇರಣೆಯಾಗಿದ್ದಾರೆ. ಎಂದು ಹೇಳಿದರು. ಕಾರ್ಯಕ್ರಮದಲ್ಲಿ ನಗರಸಭೆ ಆಯುಕ್ತರು ಸ್ಥಾಯಿ ಸಮಿತಿ ಅಧ್ಯಕ್ಷರು, ಹಿರಿಯ ಮುಖಂಡರು, ಜಿಲ್ಲಾ ಆಯುಕ್ತ(ಗೈ) ಆದ ಶ್ರೀಮತಿ ನಾಗರತ್ನ ಅನಾಪೂರ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎಂ. ಪಡ್ಡೆದಾರ ಹಾಗೂ ಇತರರು ಭಾಗವಹಿಸಿದ್ದರು.

## ಶ್ರದ್ಧಾಂಜಲಿ



ಶ್ರೀ ರಾಮಣ್ಣ ಆರ್. ಬಿನ್ ರಂಗಪ್ಪ ಇವರು ಮಾರ್ಚ್ 5, 2017 ಭಾನುವಾರದಂದು ನಿಧನರಾಗಿರುತ್ತಾರೆ. ಶ್ರೀಯುತರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬೊಮ್ಮನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಇಲ್ಲಿ ಮುಖ್ಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯಲ್ಲಿ 15 ವರ್ಷ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುತ್ತಾರೆ.

ಇವರ ನಿಧನದಿಂದ ಉಂಟಾದ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ನೀಡಲೆಂದು ಮತ್ತು ಮೃತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

# ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ನಡೆದ ಸ್ಕೌಟ್ಸ್-ಗೈಡ್ಸ್‌ಗಳ ಚಟುವಟಿಕೆಗಳು





ದಕ್ಷಿಣ ಕನ್ನಡ-"ಸ್ವಚ್ಛ ಭಾರತ್ ಅಭಿಯಾನ"





ಚಾಮರಾಜನಗರ-ಸಾಹಸ ಚಟುವಟಿಕೆಗಳು






ಉಡುಪಿ-"ಸ್ವಚ್ಛ ಭಾರತ್ ಅಭಿಯಾನ್" ಹಾಗೂ ಅಡುಗೆ ಮಾಡುತ್ತಿರುವುದು



ತುಮಕೂರು-ಸಮುದಾಯ ಸೇವಾ ಶಿಬಿರ



ಗದಗ-ಸ್ವಚ್ಛತಾ ಕಾರ್ಯಕ್ರಮ

Regd. as News Paper (Magazine) RNI No: 13348/1959. Postal Regd. No. KA/BGGPO/ ...17
Permitted to Post under WPP System Vide No.: WPP-340, Date of Publishing 28th of Every ...th
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 04+3... = 40)



ಮಾರ್ಚ್ 22ರಂದು ಬೆಂಗಳೂರಿನ ವಿಧಾನಸೌಧ ಮುಂಭಾಗದಲ್ಲಿ "ವಿಶ್ವ ಜಲ ದಿನ-2017" ಕುರಿತು ಸನ್ಮಾನ್ಯ ಮುಖ್ಯಮಂತ್ರಿಗಳು ಮಾತನಾಡುತ್ತಿರುವುದು.



"ವಿಶ್ವ ಜಲ ದಿನ-2017" ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರೊಂದಿಗೆ ಶ್ರೀ ಸುರೇಶ್ ಹೆಬ್ಬಿಕರ್ ಹಾಗೂ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು



ಮಾರ್ಚ್ 23ರಂದು ಶಾಂತಿ ಗೃಹದಲ್ಲಿ ಜರುಗಿದ "ವಿಶ್ವ ಮಹಿಳಾ ದಿನಾಚರಣೆ" ಕಾರ್ಯಕ್ರಮದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಎಂ.ಎ. ಖಾಲಿದ್ ಶ್ರೀಮತಿ ಸರೋಜ ವಿ. ನಾಯ್ಡು, ಶ್ರೀ ಸಿ.ಎಸ್. ರೆಡ್ಡಿ, ಶ್ರೀಮತಿ ಸರ್ವಮಂಗಳಮ್ಮ, ಶ್ರೀಮತಿ ರೇಣುಕ, ಶ್ರೀಮತಿ ಸುಶೀಲಮ್ಮ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಮಾರ್ಚ್ 23ರಂದು ಶಾಂತಿ ಗೃಹದಲ್ಲಿ ಜರುಗಿದ "ವಿಶ್ವ ಮಹಿಳಾ ದಿನಾಚರಣೆ" ಪ್ರಯುಕ್ತ "ಬದಲಾವಣೆಗಾಗಿ ದಿಟ್ಟನಡೆ" ಎಂಬ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀಮತಿ ರತ್ನಪ್ರಭ, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಮತ್ತು ಶ್ರೀಮತಿ ನಿರ್ಮಲ ಎಲಿಗಾರ್, ಸಹನಿರ್ದೇಶಕರು, ಬೆಂಗಳೂರು ದೂರದರ್ಶನ ಅವರು ನೆರವೇರಿಸಿದರು.






ಫೆಬ್ರವರಿ 22ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ "ವಿಶ್ವಚಿಂತನಾ" ದಿನಾಚರಣೆ ಕಾರ್ಯಕ್ರಮದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್ ಸಿಂಧ್ಯ ಅವರೊಂದಿಗೆ ರಾಜ್ಯ ಸಂಸ್ಥೆ ಪದಾಧಿಕಾರಿಗಳನ್ನು ಹಾಗೂ ಕಾರ್ಯಕ್ರಮದಲ್ಲಿ ಭಾಗವಹಿಸಿರುವ ಬನ್ನೀಸ್ ಪುಟಾಣಿಗಳನ್ನು ಕಾಣಬಹುದು.



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26